॥ ಶ್ರೀಃ ॥

ರ್ಣಾಟಕ ಸತೀಹಿತೈಷಿಣೀ ಗ್ರಂಥಮಾಲಾ ಸಂಖ್ಯೆ ೧೧

# ABALADAURJANYAM

# ಅಬಲಾ ದೌರ್ಜನ್ಯಂ

ಸಂಚನಗೂಡು

ಕರ್ಣಾಟಕ ಸತೀಹಿತೈಷಿಣೀ ಮಾತೃಮಂದಿರದಲ್ಲಿ

ಪ್ರಕಟವಾದುದು

೧೯೩೧

ಪರಿಷ್ಕೃತ ಮುದ್ರಣ ೩,೦೦೦ ಪ್ರತಿಗಳು

ಇದರ ಸರ್ವ ಸ್ವಾತಂತ್ರ್ಯವೂ ಸಂಪಾದಕಿಯರದಾಗಿರುವುದು

ಶ್ರೀಃ

ಪ್ರಸೀದತು

ಶ್ರೀ ಲಕ್ಷ್ಮೀನೃಸಿಂಹ ಪರಬ್ರಹ್ಮನ್



ತ್ವದ್ವೃತ್ತವಾಚಾ ತವ ಕಿಂಕರೇಣ
ತ್ವತ್ಪ್ರೀತಿಕಾಮೇನ ಮಯಾಕೃತೇನ ।
ಸ್ತೋತ್ರೇಣ ಲಕ್ಷ್ಮೀನೃಹರೇ ಸವಿಷ್ಣುಃ
ಪ್ರೀತೋಭವತ್ವಂ ಕರುಣಾದ್ರ್ರದೃಷ್ಟಿಃ ॥

ಸಮರ್ಪಣಂ

(ವಿಭವ ಮಾಘ ಶುಕ್ಲ ಭೀಷ್ಮಾಷ್ಟಮಿ ಸ್ಥಿರವಾಸರ)

**'ಶ್ರೀಪಾದರೇಣು'**

|| ಶ್ರೀ : ||

# ಸತೀಹಿತೈಷಿಣಿಯ ಸಂಪ್ರಾರ್ಥನಾ.

---

ಸತೀಹಿತೈಷಿಣಿಯ ಅಜ್ಞಾತವಾಸಕ್ಕೆ ಪ್ರಾರಂಭವಾಗಿ ಇಂದಿಗೆ ೧೩ ವರ್ಷಗಳಾದವು. ಸತೀಹಿತೈಷಿಣೀ ಗ್ರಂಥಮಾಲೆಯ ಹತ್ತನೇ ಪುಸ್ತಕವಾದ 'ಪೂರ್ಣಕಲೆ' (ಅಪೂರ್ಣವಾಗಿಯೇ) ಪ್ರಕಟವಾಗಿ ವಾಚಕರ ಕುತೂಹಲವನ್ನು ಹೆಚ್ಚಿಸಿ ಗ್ರಂಥಮಾಲೆಯ ೧೧ ನೇ ಪುಸ್ತಕವಾಗಿ ಆನಂದಮಯಿಯನ್ನೂ, ೧೨–೧೩ನೇ ಗ್ರಂಥಗಳಾಗಿ ಮಣಿಮಾಲಾ ಬ್ರಹ್ಮಚಾರಿಣಿಯರನ್ನೂ ಪ್ರಕಟಿಸುವುದಾಗಿ ವಾಗ್ದಾನಮಾಡಿ ೧೩ ವರ್ಷಗಳಾದರೂ ಆಡಿದಂತೆ ಮಾಡಲಾರದೆ ತಪ್ಪಿ ಸತೀಹಿತೈಷಿಣೀ ಅಭ್ಯುದಯೇಚ್ಛುಗಳ ಆಗ್ರಹಕ್ಕೆ ಗುರಿಯಾಗಿದ್ದುದು, ದೈವಕೃಪೆಯಿಂದ ಇಂದಿಗಾದರೂ ಸತೀಹಿತೈಷಿಣಿಯ ಪುನರ್ದರ್ಶನದ ಯೋಗವನ್ನು ಕಂಡೆವೆಂಬ ಸಂತೋಷದಿಂದ ಸಾಹಸಮಾಡಿ ನಿಂದುದಾಯ್ತು. ಇಷ್ಟು ದೀರ್ಘಕಾಲ ಅಜ್ಞಾತವಾಸದಲ್ಲಿದ್ದ ಅಬಲೆಯರಾದ **ಮಣಿಮಾಲಾ, ಆನಂದಮಯೀ, ಬ್ರಹ್ಮಚಾರಿಣಿಯರ** ಅಂತರ್ಬಹಿಃಸಂಸ್ಕರಣಕ್ಕಾಗಿ ಇಂದು ಮೊದಲು **"ಅಬಲಾ ದೌರ್ಜನ್ಯ"**ವೆಂಬ ಪ್ರಬಂಧವನ್ನೇ ಸತೀಹಿತೈಷಿಣಿಯ ೧೧ ನೇ ಗ್ರಂಥವಾಗಿ ಕಾಳಯುಕ್ತ—ಸಿದ್ಧಾರ್ಥಿಗಳಲ್ಲಿ ಕರ್ನಾಟಕ ಸಂದಿನಿಯಲ್ಲಿ ಪ್ರಕಟವಾಗಿದ್ದ ಈ ಪ್ರಬಂಧವನ್ನು ಪುಸ್ತಕರೂಪದಲ್ಲಿ ಪ್ರಕಟಿಸಿರುವೆವು. ಇಂದಿನಿಂದ ಸತೀಹಿತೈಷಿಣಿಯು ನಿಯತವಾಗಿ ತ್ರೈಮಾಸಿಕ ಗ್ರಂಥಮಾಲೆಯಾಗಿ ಪ್ರಕಟಗೊಂಡು ಚಂದಾದಾರರ ಹಸ್ತವನ್ನಲಂಕರಿಸುವುದರಲ್ಲಿ ಸಂಶಯವಿಲ್ಲವೆಂದಿಷ್ಟು ನಿವೇದಿಸಿ, ಇಂದು ನಿಮ್ಮ ನಿಮ್ಮ ಅಭಿಪ್ರಾಯವನ್ನು ತಿಳಿದುಕೊಳ್ಳುವ ಕುತೂಹಲದಿಂದ ನಿರೀಕ್ಷಿಸುತ್ತಿರುವೆವು. ಸತೀಹಿತೈಷಿಣಿಗೆ (ಅಡ್ವಾನ್ಸು) ಮುಂಗಡವನ್ನಿತ್ತಿರುವವರಿಗೆಲ್ಲಾ ಪ್ರತಿ ಪುಸ್ತಕವೂ "ಅ.ರಿ. ಪಾರ್ಸಲ್" ದ್ವಾರಾ ಕಳುಹಲ್ಪಡುವದು. ಮಣಿಮಾಲೆ ಮುಂದಿನ ಚೈತ್ರ ಬಹುಳದಲ್ಲಿ ನಿಮ್ಮ ಕರಕಮಲಗಳನ್ನು ಅಲಂಕರಿಸುವದರಲ್ಲಿ ಸಂಶಯವಿಲ್ಲ.

**ಪ್ರಮೋದೂತ ಮಾಘ ಶುಕ್ಲ, ದ್ವಾದಶಿ,**
**ತಾ|| ೩೧–೧–೧೯೩೧.**

ಇಂತು ನಿವೇದಿಸುವ,
**ಹಿತೈಷಿಣಿ.**

ಶ್ರೀ :

# ಅಬಲಾ ದೌರ್ಜನ್ಯಂ

---

ಶ್ರೀರಂಗೇಶಯಯಾ ಕರೋಷಿ ಜಗತಾಂ ಸೃಷ್ಟಿ ಪ್ರತಿಷ್ಠಾ ಕ್ಷಯಾ ।
ಯತ್ರಾಮುತ್ರಚ ಭೋಗಮಕ್ಷಯ ಸುಖಂ ಮೋಕ್ಷಂಚ ತತ್ತತ್ಪ್ರಜಾ ॥
ತತ್ಸ್ವಾತಂತ್ರ್ಯಮಪಾಸ್ಯ ಕಲ್ಪಿತ ಜಗತ್ ಕ್ಷೇಮಾತಿ ಹೃದ್ಯಾ ಸ್ವತಃ ।
ಕಾನ್ತಿಸ್ತೇ ಕರುಣಾ ಸಖೀ ವಿಜಯತಾಂ ಕ್ಷೇಮಾಯ ಸರ್ವಾತ್ಮನಾಂ ॥

(ಕ್ಷ. ಷೋ.)

## ಕ್ಷಮಾ ಪ್ರಾರ್ಥನೆ.

ಕ್ಷಮೆಯಿರಲಿ, ನನ್ನ ಪ್ರಿಯಭಗಿನಿಯರೇ, ಕ್ಷಮೆಯಿರಲಿ.

**“ಅಬಲಾ ದೌರ್ಜನ್ಯಂ”** ಎಂಬ ಹೆಸರನ್ನು ಕೇಳಿದ ಮಾತ್ರದಿಂದಲೇ ಉಗ್ರರೂಪವನ್ನು ತಾಳಿ ಹಿತೈಷಿಣಿ—ನಂದಿನಿಯರನ್ನು ಬಗೆಯಬೇಡಿರಿ, ತಾಯಿಯರೇ, ಕೈನೀಡಿ ಕೇಳಿಕೊಳ್ಳುತ್ತಿರುವೆನು; ತಾಳ್ಮೆಯನ್ನು ತೆಗೆದುಕೊಳ್ಳಿರಿ! ಹೆಸರೆತ್ತುವುದೇ ಸಾಕೆಂದು ಮುಳಿದು ಮೂದಲಿಸಬೇಡಿರಿ. ಇಷ್ಟಕ್ಕೇ ಈ ಬಗೆಯ ದೌರ್ಜನ್ಯಾರೋಪದ ವೃಥಾಲಾಪದಿಂದ ಸ್ತ್ರೀ ಸಮುದಾಯವನ್ನೇ ತೆಗೆದಾಡಿರುವೆನೆಂದು ಅಲ್ಲದ ಸಲ್ಲದ ಭಾವನೆಯನ್ನು ತಳೆದು, ಅರ್ಥವಿಲ್ಲದ ಅನರ್ಥ ಕೋಪಕ್ಕೆ ನಿಮ್ಮ ಕೋಮಲ ಹೃದಯವನ್ನು ಮಾತ್ರ ತೆರಬೇಡಿರಿ!

ನನ್ನ ಉದ್ದೇಶವು ಅಷ್ಟು ನಿಂದ್ಯವಾದುದಲ್ಲ; ಸ್ತ್ರೀ ಜಗತ್ತನ್ನು ನಿಂದಿಸುವುದೇ ನನ್ನ ಉದ್ದೇಶವೆಂದು ನೀವು ಭಾವಿಸುವಂತಿಲ್ಲ; ಹಾಗೆ ಒಂದು ವೇಳೆ, ನೀವು ಭಾವಿಸುವುದಾದರೂ ಒಂದಿಷ್ಟು ವಿಚಾರಮಾಡಿ ನೋಡಿರಿ? ಸ್ತ್ರೀ ವರ್ಗದಲ್ಲಿ ಒಬ್ಬಳಾಗಿದ್ದು ಆ ನಮ್ಮ ಸ್ತ್ರೀ ವರ್ಗವನ್ನು ದೂರಿಗೆಳೆದಾಡುವೆನೆಂದರೆ, ನಂಬಬಹುದಾದ ಮಾತೇ? ಅಂತಹ ಸ್ವರೂಪನಾಶನದ—

ಆತ್ಮಘಾತದ ವಿಚಾರದಲ್ಲಿ ಪ್ರವರ್ತಿಸುವುದು ನನ್ನ ಶೀಲವಲ್ಲ. ಆ ಪರಮ ಪೂಜ್ಯಳಾದ ಆರ್ಯಮಾತೆಯೇ ನನ್ನ ಪ್ರಿಯ ಮಾತೆಯೂ ಪ್ರೇಯ ಮೂರ್ತಿಯೂ ಆಗಿರುವಲ್ಲಿ, ಆ ತಾಯಿಯ ಅಂಶರೂಪಿಣಿಯರಾದ ನಮ್ಮ ಮಹಿಳೆಯರನ್ನು ದೂರಿದರೆ ಅದು ನನ್ನ ತಾಯಿಗೂ ಸೇರಿದಂತಾದೀತೆಂದು ತಿಳಿದಿರುವ ನಾನು, ನನ್ನ ಭಗಿನಿಯರನ್ನೂ ದೂರಿಗೆಳೆದು ಅದರಿಂದ ಅವರ ಪ್ರಾಶಸ್ತ್ಯಕ್ಕೆ ಕಲಂಕವನ್ನು ಆರೋಪಿಸಿ ಅನರ್ಥವನ್ನುಂಟುಮಾಡ ಬೇಕೆಂದು ಮನಸ್ಸಿನಿಂದಾದರೂ ನೆನೆದಿರುವುದಿಲ್ಲ. ಚೆನ್ನಾಗಿ ನಂಬಿರಿ!

"ಹಾಗಿದ್ದರೆ, ದೌರ್ಜನ್ಯವನ್ನೇ ಹುಡುಕುತ್ತಿರುವುದೇಕೆ? ನಮ್ಮವ ರಲ್ಲಿ ಸೌಜನ್ಯವೆಳ್ಳಷ್ಟೂ ಇಲ್ಲವೋ" ಎಂದು ಕೇಳುವಿರೇನು? ಭಗಿನಿ ಯರೇ! ಅದಕ್ಕೆ ನೀವೇ ಉತ್ತರವಾದಿಗಳಾಗಿರುವಿರೆನ್ನುವೆನು. ನೋಡಿರಿ.– ಆವುದೇ ಒಂದು ವಸ್ತು ವಿಷಯವಾಗಿ, ಒಂದು ವ್ಯಕ್ತಿ ವಿಷಯವಾಗಿ ನಾವು ನೋಡಹೋದರೂ ನಮ್ಮ ದೃಷ್ಟಿಗೆ ಗುಣಭಾಗಗಳು ಹಲವು ತಿಳಿದು ಬಂದು, ಒಂದೆರಡು ದೋಷಗಳು ಕಂಡುಬಂತೆಂದರೂ ಸಾಕು, ನಾವು ಅದರ ದೋಷವನ್ನೇ ಉದ್ಘಾಟನ ಮಾಡುವೆವು. ಅದೇಕೆ? ಅದು ಗುಣಸಮೂಹ ದಿಂದ ಸುತ್ತುವರಿದಿದ್ದರೂ ಅಲ್ಪಸ್ವಲ್ಪ ದೋಷದಿಂದ ಕೂಡಿ, ನಿರ್ದುಷ್ಟ ವಸ್ತುವೆನ್ನಿಸಲಾರದೆಂದಲ್ಲವೇ, ಅದನ್ನು ದೋಷ ನಿರ್ಮುಕ್ತವಾಗಿ ಮಾಡಲು ಹಾಗೆ ಉದ್ಘಾಟನ ಮಾಡಲೆಳಸುವೆವು? ಹಾಗೆಂದ ಬಳಿಕ ಸಿಟ್ಟೇಕೆ?

ನಮ್ಮ ನಾರೀವರ್ಗದಲ್ಲಿರುವ ಸೌಜನ್ಯರೂಪದ ಕೋಮಲತೆಯು ಪವಿತ್ರವಾದ ಪ್ರೇಮ, ಪರಾನುಕಂಪನ, ಸೌಶೀಲ್ಯಗಳೇ ಮೊದಲಾದ ಗುಣ ಗಳನ್ನು ಆಶ್ರಯಿಸಿಯೇ ಸಮಾಜವು ತನ್ನ ಮರ್ಯಾದೆಯನ್ನುಳಿಸಿಕೊಂಡು ಬಂದಿದೆಯೆಂದಮೇಲೆ ಆ ನಮ್ಮ ಆರ್ಯಮಹಿಳೆಯರ ವಿಷಯದಲ್ಲಿ ನನ್ನ ಭಾವನೆಯು ಅದೆಂತಹ ಉಚ್ಚಭಾವದಲ್ಲಿರಬೇಕೋ ನೀವೇ ಆಲೋಚಿಸಿರಿ?

ಧರ್ಮಬಾಂಧವರೇ! ನೀವು ವ್ಯಂಗ್ಯವಾಗಿ ನಗುವಿರೇನು? '**ಅಬಲಾ ದೌರ್ಜನ್ಯ**'ವನ್ನು ಹೊರಗೆಡಹುವೆನೆಂದೋ? ಒಂದೆರಡು ಗಳಿಗೆ ತಡೆದು ಕೇಳಿರಿ, ದೌರ್ಜನ್ಯ ವೃಕ್ಷಕ್ಕೆ ಅಂಕುರಾರ್ಪಣಮಾಡಿದವರು ನೀವಾದುದ

ರಿಂದ ಅದರ ಬಹುಮಾನದ ಫಲವು ನಿಮ್ಮನ್ನೇ ಸೇರಿರುವುದೆಂಬ ಉತ್ತರವು ಹೊರಡುವುದು! ಆದುದರಿಂದ ಆತುರಪಟ್ಟು ಅಪಹಾಸಮಾಡದೆ ತಡೆಯಿರಿ! ಪ್ರಕೃತದಲ್ಲಿ ನಮ್ಮ ಲೇಖನದ ಗುರಿಯೆಂದರೆ ನಮ್ಮ ಆರ್ಯಮಹಿಳಾ ವರ್ಗಕ್ಕೆ ಮೊದಲು ಸಲ್ಲುತ್ತಿದ್ದ, ಸನ್ಮಾನವನ್ನು ಪರಾಧೀನಗೊಳಿಸಿ ಮೆರೆಯುತ್ತಿರುವ ಆ ಪ್ರಬಲ ದೌರ್ಜನ್ಯ ಸಂಬಂಧವಾದ ಅಪವಾದವನ್ನು ಸರ್ವ ಸಾಹಸ, ಪ್ರಯತ್ನದಿಂದಲೂ ಜಯಿಸಿ ನಮ್ಮವರ ಕೀರ್ತಿಚಂದ್ರಿಕೆಯು ಮತ್ತೆ ನಿಷ್ಕಲಂಕವಾಗಿ ಜಗತ್ತನ್ನೇ ಬೆಳಗುವಂತೆ ಮಾಡಲು ನಮ್ಮ ಮಹಿಳಾ ಗುಣದ ಸಹಾನುಭೂತಿಯನ್ನು ಕೋರುವದೇ ಆಗಿರುವುದರಿಂದ ಇದರಲ್ಲಿ ತೋರಿಬರುವ ಸ್ಪಷ್ಟೋಕ್ತಿಗೆ ರುಷ್ಟರಾಗದೆ ಸಹನೆಯಿಂದ ಸಮಾಲೋಚಿಸುತ್ತ ಬರಬೇಕೆಂದು ಮೊದಲು ಕ್ಷಮೆಯನ್ನು ಕೋರಿ ಮುಂಬರಿವೆನು.

---

# I

## ದೌರ್ಜನ್ಯಕ್ಕೆ ಮೂಲಕಾರಣಗಳಾದ ಆಲಸ್ಯಾದಿಗಳ ಅಲಂಘ್ಯ ಫಲಗಳು.

**"ದೌರ್ಜನ್ಯಂ"** ಎಂದರೆ, ಧೃಷ್ಟತನವೆಂದು. (ದಯಾ ದಾಕ್ಷಿಣ್ಯ ಧರ್ಮ ಶ್ರದ್ಧೆಗಳಿಲ್ಲದ ಪರುಷವೃತ್ತಿಯೆಂದು ಅಭಿಪ್ರಾಯವು.) '**ಅಬಲಾ ದೌರ್ಜನ್ಯ**'ವೆಂದರೆ ಅಬಲೆಯರ ಧಿಟ್ಟತನವೆಂದಾಗುವದು. ಇದನ್ನೇ ಸ್ತ್ರೀಯರ ಆತ್ಮೋನ್ನತಿ ಮತ್ತು ಸಮಾಜದ ಸಂಪದಭಿವೃದ್ಧಿಗಳಿಗೆ ಆತಂಕವನ್ನುಂಟುಮಾಡುವ ದೌರ್ಭಾಗ್ಯವೆಂದೂ ಹೇಳಬಹುದು. ಹೇಗೆ? ಯಾವ ಯಾವ ಬಗೆಯಿಂದ ಎಲ್ಲೆಲ್ಲಿ ಎಂದರೆ, ವರ್ತಮಾನಸ್ಥಿತಿ ವಿಚಾರದಿಂದ ಅಬಲೆಯರಲ್ಲಿ ವಿಶೇಷವಾಗಿ ಆಲಸ್ಯ, ಉದಾಸೀನ, ಆತ್ಮಸ್ತುತಿ, ಅಸೂಯೆ, ಆಗ್ರಹ, ಹಟ—ಇತ್ಯಾದಿ ಅಜೇಯಗಳಾದ ಹಲವು ಮಹಾಗುಣಗಳು ತುಂಬಿಹೋಗಿವೆಯೆಂದೂ, ಎಲ್ಲಿ, ಯಾರಲ್ಲಿ, ನೃಶಂಸೆ, ನಿರ್ಘೃಣತೆ, ಪರಸ್ವಾಪಹರಣ, ಪರಪೀಡನಾದಿ ಕ್ರೌರ್ಯವು ತೋರಿಬರುವುವೋ ಅವೆಲ್ಲಕ್ಕೂ ಸ್ತ್ರೀಯರ ದೌರ್ಜನ್ಯವೇ ಕಾರಣವೆಂದೂ, ಇನ್ನೂ ಎಷ್ಟೆಷ್ಟೋ ಬಗೆಯಿಂದ

ಸ್ತ್ರೀಯರಲ್ಲಿ ಇದ್ದುದನ್ನೂ ಇಲ್ಲದುದನ್ನೂ ಸೇರಿಸಿ ದೌರ್ಜನ್ಯಾಪವಾದದ ದೊಡ್ಡ ಹೊರೆಯನ್ನು ಅವರ ಮೇಲೆ ಹೊರಿಸಿ, ತಾವದನ್ನು ನೋಡಿ ನಲಿಯಬೇಕೆಂದಿರುವ ಮಹನೀಯರು ಬಹುಮಂದಿಯುಂಟೆಂದು ಹೇಳಬಹುದಾಗಿದೆ. ಮಾಡತಕ್ಕುದೇನು ?

ಆಲಸ್ಯಾದಿಗಳೆಲ್ಲ ಒಂದೊಂದೇ ಮಾನವರ ಸ್ವರೂಪನಾಶಕ್ಕೆ ಸಾಕಾಗಿರುವುದು. ಅಂತಹುದರಲ್ಲಿ ಎಲ್ಲವೂ ಒಂದೆಡೆಯಲ್ಲಿಯೇ ಇರುವುದೆಂದು ಕಲ್ಪಿಸಿ ಹೇಳುವಂತಹ ಕರ್ಣಕಠೋರವಾದ, ಹೃದಯವಿದ್ರಾವಕವಾದ, ಮರ್ಮಾಂತಿಕ ಯಾತನೆಯನ್ನುಂಟುಮಾಡುವ ವ್ಯಥಾಪವಾದವನ್ನು ಕೇಳಿಯೂ ಅದನ್ನು ನಿವಾರಣೆಮಾಡಿಕೊಳ್ಳಲು ಪ್ರಯತ್ನಶೀಲರಾಗದೆ **"ಕುಣಿವ ಕಾಲಿಗೆ ಕೊಣಮಿಣಿ ಗೆಜ್ಜೆ," "ತೂಕಡಿಸುವವರನ್ನು ತಟ್ಟಿ ಮಲಗಿಸಿದಂತೆ"** ಎಂಬ ಗಾದೆಗಳಿಗನುಸಾರವಾಗಿ ನಮ್ಮವರು ಇನ್ನೂ ದುರ್ಲಕ್ಷ್ಯದಿಂದಿರುವುದು, ಸೋಲದೆ ಹೇಳುತ್ತಿರುವ ದೂಷಕರ ನಾಲಗೆಗೆ ಸವಿತೋರುವಂತೆಯೇ ಆಗಿದೆಯೆಂದು ತಿಳಿದು ವಿಷಾದಿಸಬೇಕಾಗಿದೆ. ಹಾಗಿದ್ದರೆ ಆಲಸ್ಯವೇ ಆದಿಯಾದ ದುರ್ಗುಣದಿಂದ ಉಂಟಾಗುವ ಫಲವೇನು ? ಎಂದು ಕೇಳುವಿರಲ್ಲವೇ ? ನನ್ನ ಸೋದರೀ ಸೋದರರೇ ! ತಾಳ್ಮೆಯಿಂದ ನನ್ನೀ ನಿವೇದನವನ್ನು ಕೇಳಿ ನಿಮ್ಮಲ್ಲಿಯೇ ವಿಚಾರ ಮಾಡಿರಿ !

**ಆಲಸ್ಯ**—ಆಲಸ್ಯವೆಂಬುದೇ ಸೋಮಾರಿತನವು. ಸೋಮಾರಿತನವೇ ಈಗಿನ ನಮ್ಮವರಲ್ಲಿ ಪ್ರಬಲವಾದ ದೋಷವು. ಈ ದೋಷವೇ ನಮ್ಮ ಇಂದಿನ ವಿಷಮಸ್ಥಿತಿಗೆ ಅಂಕುರಪ್ರಾಯವು. ಇದೇ ನಮ್ಮನ್ನು ಆಕ್ರಮಿಸಿರುವ ಅಪವಾದಕ್ಕೆ ಕಾರಣವು. ಈ ಆಲಸ್ಯವೆಂಬುದು ನಮ್ಮನ್ನು ಸಮೀಪಿಸದಂತೆ ನಾವು ಎಚ್ಚತ್ತಿರಬೇಕು. ಒಂದುವೇಳೆ ತಲೆಹಾಕಿದರೂ, ಕೂಡಲೇ ಅದನ್ನು ಹೊರಡಿಸುವುದಕ್ಕಾದರೂ ನಾವು ಮರೆಯದೆ ಸರ್ವಪ್ರಕಾರದಿಂದಲೂ ಪ್ರಯತ್ನಿಸಬೇಕು. ಇಲ್ಲವಾದರೆ, ಇದು ನಮ್ಮ ಅಂತರ್ಬಹಿರಿಂದ್ರಿಯಂಗಳಲ್ಲಿಯೂ ವ್ಯಾಪಿಸಿ ತನ್ನ ಅದ್ಭುತ ಶಕ್ತಿಯಿಂದ, ಭಯಂಕರವಾದ ಸನ್ನಿಪಾತರೋಗದಂತೆ ಪರಿಣಮಿಸುವುದು. ದೌರ್ಭಾ

ಗ್ಯಕ್ಕೆ ತವರ್ಮನೆಯಾದ ಆಲಸ್ಯವಿದ್ದೆಡೆಯಲ್ಲಿ, ನಿಂದೆಯೇ ಮೊದಲಾದ ದುರಾಚಾರದ ದುಷ್ಟ ಕಣಗಳು ಹುಟ್ಟುವುವು.

ಆಲಸ್ಯವುಂಟಾಯಿತೆಂದರೆ ಅದರಿಂದ ಉದಾಸೀನ, ಅದರಿಂದ ಅವಿಚಾರ, ಅದರಿಂದ ಅಹಂಕಾರ, ಆ ಬಳಿಕ ಆತ್ಮಸ್ತುತಿ, ಅದಾದ ಬಳಿಕ ಪರನಿಂದೆ, ಪರನಿಂದೆಯನ್ನೂ ದಾಟಿ ಬಂದರೆ—ಅಸೂಯೆ, ಆಗ್ರಹ, ಉನ್ಮಾದ ಇವು ಗಳು ಕ್ರಮವಾಗಿ ಒಂದರಿಂದ ಮತ್ತೊಂದು ಹೀಗೆ ಶಾಖೋಪಶಾಖೆ ಗಳಾಗಿ ಹುಟ್ಟುವುವು.

ಹೀಗೆ ಆಲಸ್ಯಾದಿಗಳಿಂದುಂಟಾದ ಅವಿಚಾರವು ಧರ್ಮದಲ್ಲಿ ಅಶ್ರದ್ಧೆ, ಗುರುದೈವಗಳಲ್ಲಿ ಅವಿಧೇಯತೆ, ಸ್ವಕರ್ತವ್ಯದಲ್ಲಿ ಪರಾಙ್ಮುಖತೆಗಳನ್ನುಂಟು ಮಾಡಿಬಿಡುವುದು. ಈ ಅವಿಚಾರವೆಂಬುದು ಯುಕ್ತಾಯುಕ್ತ, ಸಾರಾ ಸಾರ, ನ್ಯಾಯಾನ್ಯಾಯ ವಿಚಾರ ಜ್ಞಾನವಿಲ್ಲದ ಮೂರ್ಖಭಾವವು. ಇದರಿಂದ ಕರ್ತವ್ಯವೇನೆಂದಾಗಲಿ, 'ತಾನಾರು, ಹೇಗಾದೆ, ಏಕೆ ಹುಟ್ಟಿದೆ, ಏನುಮಾಡಬೇಕಾಗಿದೆ' ಎಂಬ ಆತ್ಮಸಮಾಧಾನದ ಮಾತನ್ನಾಗಲಿ ಗಮನಿಸಲಾರದೆ ಕೇವಲ ಆಶಾಪೂರಣದಲ್ಲಿ ಮಾತ್ರವೇ ಗುರಿಯಿಟ್ಟು ನಡೆಯುವಂತೆ ಮಾಡುವುದು. ಈ ಆಶೋತ್ತರವು ಇತಿಕರ್ತವ್ಯದ ಸುಶಿಕ್ಷಣೆ ಗೊಳಪಡದೆ ಸ್ವೇಚ್ಛೆಯಲ್ಲಿರುವುದರಿಂದ ಆವ ವೇಳೆಯಲ್ಲಿ, ಆವ ವಿಷಯ ಗಳಲ್ಲಿ ಆವುದರ ಕಡೆಗೆ ಮನಸ್ಸು ಹೋಗುವುದೋ ಅದನ್ನು 'ಸಾಧಿಸ ಬಹುದೇ—ಕೂಡದೇ? ಅದು ನನಗೆ ಪ್ರಾಪ್ಯವಸ್ತುವೇ ದುರ್ಲಭವೇ?' ಎಂಬೀ ಪೂರ್ವಾಪರವಿಚಾರದ ಸದಸದ್ವಿವೇಕವನ್ನೇ ಹಾಳುಮಾಡಿ, ಹೇಗಾದರೂ ಹೇಗಿದ್ದರೂ ಅದನ್ನು ಸಾಧಿಸಿಯೇ ತೀರಬೇಕೆಂಬ ಹಟಮಾರಿ ತನವನ್ನುಂಟುಮಾಡುವುದು.

ಈ ಹಟವು ಮನಸ್ಸಿನಲ್ಲಿ ನೆಟ್ಟಿತೆಂದರೆ ಸಾಕು, ಅದರ ಸಾಧನೆಗಾಗಿ ಆಗ್ರಹ, ಸ್ಪರ್ಧೆ, ಪರಸ್ವಾಪಹರಣ, ಪರಪೀಡನೆಗಳೇ ಮುಖ್ಯಮುಖ್ಯ ವಾದ ಆಯುಧಗಳಾಗಿ ಪ್ರಯೋಗಿಸಲ್ಪಡುವುವು. ಹಾಗಾದ ಬಳಿಕ ಲಜ್ಜೆಯೂ ಸಾಧುಭಾವನೆಯೂ ದೂರವಾಗುವುವು. ಅವುಗಳಿದ್ದೆಡೆಯಲ್ಲಿ ಅನೃತ ಕುತಂತ್ರಗಳೂ ಬಂದು, ಪ್ರಭುತ್ವವನ್ನು ವಹಿಸುವವು. ಇಂತಹ

ಹಟವೆಂಬ ಬ್ರಹ್ಮದಂಡದಿಂದಲೇ ಅಬಲೆಯರು ಪ್ರಬಲವಾದ ಕಾರ್ಯಗಳನ್ನು ಸಾಧಿಸಬಲ್ಲವರಾಗಿ ಜಗತ್ತಿಗೆ ಕೆಲವು ವೇಳೆಗಳಲ್ಲಿ ಕೌತುಕವನ್ನೂ ಮತ್ತೆ ಕೆಲವು ವೇಳೆಗಳಲ್ಲಿ ಭೀತಿ, ಶಂಕೆ, ವಿಷಾದ, ಬೇಸರಗಳನ್ನೂ ಉಂಟು ಮಾಡುತ್ತ "**ಅಬಲಾ**" ಎಂಬ ಶಬ್ದಕ್ಕೆ "**ಅತಿಬಲ**" ಅಥವಾ "ಬಲಾಪೇಕ್ಷೆಯಿಲ್ಲದವಳು" ಎಂಬ ವಿಪರೀತಾರ್ಥ ಕಲ್ಪನೆಗೂ ಅವಕಾಶವನ್ನು ಕಲ್ಪಿಸಿಕೊಡುತ್ತಿರುವರು. ಈ ಹಟವೆಂಬುದು ಸ್ತ್ರೀ ಸಾಮಾನ್ಯದಲ್ಲೆಲ್ಲಾ ಕಂಡುಬರುತ್ತಿರುವುದಾದರೂ ಕೆಲವು ಕಡೆ ಇದು ಸ್ತ್ರೀಯರ ಸದ್ವರ್ತನೆ, ಕರ್ತವ್ಯಸಾರ್ಥಕ್ಯತೆಗಳಿಗೆ ಸಹಕಾರಿಯಾಗಿಯೂ, ಮತ್ತೆ ಕೆಲವು ಕಡೆ ಅವರ ದುರಾಚಾರದ ಅನರ್ಥ ವ್ಯಾಪಾರಕ್ಕೆ ಸಹಕಾರಿಯಾಗಿಯೂ ಪರಿಣಮಿಸುತ್ತಿರುವುದು. ಆದುದರಿಂದ ಈ '**ಹಟ**' ವೆಂಬುದನ್ನು **೧. ವಿಮರ್ಶಾಪೂರ್ವಕವಾದ ಹಟ, ೨. ಅವಿಚಾರದ ಆಶಾಂಧತೆಯ ಹಟ**— ಎಂದು ಎರಡು ಬಗೆಯಾಗಿ ವಿಭಾಗಿಸಬಹುದು. ಹೇಗೆಂದರೆ—

ಆರ್ಯ ಮಹಿಳೆಯರಾದ ನಮ್ಮ ಪ್ರಿಯ ಭಗಿನಿಯರಲ್ಲಿ ಹಲವರು ತಮ್ಮ ದೇಹ ಪೋಷಣೆಯ ವಿಷಯವಾಗಿ ತೋರುವ ಅನಾದರಣೆಯ ಫಲದಿಂದಲೋ ಅಥವಾ ವಾಯುಗುಣ, ಕಾಲಗುಣಗಳ (ವ್ಯತ್ಯಾಸ) ವ್ಯತಿರಿಕ್ತ ದೋಷದಿಂದಲೋ ಹೇಗೋ ರೋಗಾದ್ಯುಪದ್ರವಗಳಿಂದ ಅಶಕ್ತೆಯರಾಗಿ ನರಳುತ್ತಿದ್ದರೂ, ತಮ್ಮ ತಮ್ಮ ಗೃಹಕಾರ್ಯಗಳನ್ನು ಹೇಗಾದರೂ ಮಾಡಿ—ಎಷ್ಟು ಶ್ರಮವಾದರೂ ಸಹಿಸಿಕೊಂಡು, ಹಿಡಿದ ಕೆಲಸಗಳನ್ನು ಕೊನೆಮುಟ್ಟುವವರೆಗೂ ಮಾಡದೆ ಬಿಡರು. ಅದನ್ನು ಅವರು ಯಾವ ಶಕ್ತಿ ಪ್ರಭಾವದಿಂದ ಮಾಡುವರೆಂದು ವಿಚಾರಮಾಡುವೆವಾದರೆ, ಅವರ ಪವಿತ್ರಾಂತಃಕರಣದಲ್ಲಿ ಬಲವಾಗಿ ನಾಟಿರುವ ಹಟದ ಅದ್ಭುತ ಶಕ್ತಿಯಿಂದಾದುದೆಂದು ಚೆನ್ನಾಗಿ ತಿಳಿದುಬರುವುದು. ಏಕೆಂದರೆ, ವಿಮರ್ಶಾಪೂರ್ವಕವಾದ ಹಟದಲ್ಲಿ "**ಈ ಕೆಲಸವು ನನ್ನ ಪಾಲಿಗೆ ಬಂದಿರುವುದು. ಇದನ್ನು ನಾನು ಮಾಡದೆ ಬಿಟ್ಟರೆ ಕರ್ತವ್ಯಕ್ಕೆ ಲೋಪವುಂಟಾಗುವುದು. ನನ್ನ ಅಶಕ್ತತೆಗಾಗಿ ಇದನ್ನು ಇತರರ ಪಾಲಿಗೆ ಬಿಟ್ಟರೆ ನನ್ನ ಸುಖಕ್ಕಾಗಿ ಹೆರವರಿಗೆ ತೊಂದರೆಯನ್ನು ಕೊಟ್ಟ ದೋಷವುಂಟಾಗುವುದು. ಅಷ್ಟಾದರೂ ನನ್ನದಾಗಿರುವ**

**ಈ ಕೆಲಸವನ್ನು ಅನ್ಯರಿಂದ ಮಾಡಿಸಿದರೆ ನಾನು ಮಾಡಿದಂತಾಗುವುದಿಲ್ಲ. ಆದುದರಿಂದ ಇದನ್ನು ಹೇಗಾದರೂ ಎಷ್ಟು ಕಷ್ಟ ಪಟ್ಟಾದರೂ ಮಾಡಿಯೇ ತೀರಬೇಕು."** ಹೀಗೆಂಬ ದೃಢಸಂಕಲ್ಪದ ಸ್ವಾಭಿಮಾನವನ್ನುಂಟುಮಾಡುವುದು. ಈ ಅಭಿಮಾನವೇ ಕೆಲಸಗಳಲ್ಲಿ ಆಸಕ್ತಿಯನ್ನೂ ಆತುರವನ್ನೂ ಹುಟ್ಟಿಸುವುದು. ಇವೆರಡೂ ಹಿಡಿದ ಕೆಲಸವು ಪೂರೈಸುವವರೆಗೂ ದೇಹಾಯಾಸದ ಕಡೆಗಾಗಲಿ, ರೋಗಾದ್ಯುಪದ್ರವಗಳ ಕಡೆಗಾಗಲಿ ಗಮನವನ್ನು ಕೊಡದೆ ಸ್ಥಿರತೆ ಅಥವಾ ಚಿತ್ತೈಕಾಗ್ರತೆಯಿಂದ ಉದ್ದೇಶ ಸಿದ್ಧಿ ಹೊಂದುವಂತೆ ಮಾಡುವುದು. ಈ ವಿಧವಾದ ವಿಮರ್ಶಾಪೂರ್ವಕ ಹಟದ ಪರಿವರ್ತನವು ಸುಖ ಸಮಾಧಾನಗಳಿಗೆ ಆಕರವಾದ ಸದ್ವರ್ತನವೆನ್ನಿಸುವುದು. ಆದರೆ ಇಂತಹ ಮನೋಯೋಗ–ಆತ್ಮಯಜ್ಞಕ್ಕೆ ಅವರಲ್ಲಿ ಬಾಲ್ಯದಿಂದಲೂ ಅಭ್ಯಾಸವಾಗಿ ಬಂದ ಸಂಸ್ಕಾರವಾಗಿರಬೇಕು.

ಇನ್ನು ಎರಡನೆಯದಾದ **ಅವಿಚಾರದ ಅಶಾಂಧತೆಯ ಹಟ** ಎಂಬುದರ ಸ್ವರೂಪ ಗುಣಗಳೆಂದರೆ ಹೇಳಲಳವಲ್ಲದುವು. ಏಕೆಂದರೆ, ಈ ಹಟವು ನಾನಾಪರಿಯಾದ ರೂಪಾಂತರಗಳನ್ನು ಹೊಂದಿ ತಮ್ಮ ಗುರಿಗೆ ಒಳಪಟ್ಟ ವಿಷಯಗಳು ಹೇಗೇ ಇರಲಿ, ಎಷ್ಟು ಕ್ರೂರತನವಾಗಿರಲಿ, ಎಂತಹ ಹೇಯ ಅಥವಾ ಅನರ್ಥಕಾರಿಯಾಗಿರಲಿ, ಅದನ್ನು ಸಾಧಿಸಿಯೇ ತೀರಬೇಕೆಂಬುದು ಇದರ ಗುಣವು. ಇಂತಹ ಅವಿಚಾರದ ಹಟವು ಸ್ವರೂಪ ನಾಶಕ್ಕೇ ಕಾರಣವಾಗುವುದು. ಹೇಗೆಂಬುದನ್ನು ಹಿಂದೆಯೇ ಸಂಕ್ಷೇಪವಾಗಿ ಕೊಟ್ಟಿರುವೆವು. ಇನ್ನು ಈ ದುರಾಗ್ರಹದ ಹಟದಿಂದ ಶಾಶ್ವತವಾದ ಅಪಕೀರ್ತಿಗೂ ನಿರಂತರ ಶೋಕಕ್ಕೂ ಕಾರಣರಾದವರಲ್ಲಿ ಒಬ್ಬಿಬ್ಬರ ಉದಾಹರಣೆಯನ್ನು ಕೊಡುವುದು ಇಲ್ಲಿ ಮುಖ್ಯವಾಗಿದೆ:—

೧. ದಶರಥ ಪತ್ನಿಯಾದ ಕೈಕೇಯಿ ದೇವಿಯು, 'ರಾಮನಿಗೆ ವನವಾಸವೂ ತನ್ನ ಮಗನಾದ ಭರತನಿಗೆ ಯುವರಾಜ ಪಟ್ಟಾಭಿಷೇಕವೂ' ಆಗಬೇಕೆಂದು ಹಟವನ್ನು ತೊಟ್ಟು ಆ ತನ್ನ ಉದ್ದೇಶವನ್ನು ಪೂರ್ಣಗೊಳಿಸಿಕೊಂಡಳಾದರೂ ತನ್ನ ಅವಿಚಾರದ ಅಶಾಂಧತೆಗೆ ಫಲವಾಗಿ, ಪತಿಯ

ತಿರಸ್ಕಾರ, ವೈಧವ್ಯಾನುಭವಗಳಿಗೆ ಪಾತ್ರಳಾದಳಲ್ಲದೆ, ಪುತ್ರನ ಆಗ್ರಹ, ಪುರಜನರ ನಿಂದೆಗಳಿಗೂ ಗುರಿಯಾದಳು.

೨. ರಾಜೇಂದ್ರರಾಯನ ದ್ವಿತೀಯ ಪತ್ನಿಯಾದ ಚಿತ್ರಾಂಗಿಯು ಸಪತ್ನೀ ಪುತ್ರನಾದ ಸಾರಂಗಧರನನ್ನು ಮೋಹಿಸಿ ಅನೇಕವಾಗಿ ಪ್ರಾರ್ಥಿಸಿದರೂ ಜಿತೇಂದ್ರಿಯನೂ ಪೂರ್ಣಪ್ರಜ್ಞನೂ ಆದ ಆತನು ನಿರಾಕರಿಸಲು, ರೋಷತ್ವೇಷಗಳಿಂದ ಆತನ ಪ್ರಾಣಹರಣದಲ್ಲಿ ನಿಶ್ಚಿತವಾದ ಮನಸ್ಸುಳ್ಳವಳಾಗಿ, ತನ್ನ ಹಟ ಸಾಧನೆಗಾಗಿ ಅನೇಕ ಕಪಟ ನಟನೆಗಳನ್ನು ತೋರಿಸಿ, ನಿರ್ದೋಷಿಯಾದ ಮಗನ ಮೇಲೆ ಅಕ್ರಮಪ್ರವೇಶದ ಆರೋಪವಿರಿಸಿ ಆತನನ್ನು ಕೊಲ್ಲಿಸಲು ಪ್ರಯತ್ನಿಸಿದಳು. ಆದರೇನು? ಸತ್ಯಕ್ಕೂ ಧರ್ಮಕ್ಕೂ ಜಯವು ಸಿದ್ಧವೆಂಬಂತೆ ಸತ್ಯಾತ್ಮನಾದ ಸಾರಂಗಧರನು ಸಾಯಲಿಲ್ಲ! ದೈವಾನುಗ್ರಹದಿಂದ ಆಪತ್ತನ್ನು ದಾಟಿ ಅಭ್ಯುದಯವನ್ನು ಹೊಂದಿದನು. ಚಿತ್ರಾಂಗಿಯ ಹಟಕ್ಕೆ ಫಲವೆಂದರೆ ಪತಿಯ ಆಗ್ರಹಕ್ಕೂ ಅತ್ಯಂತ ಕ್ರೂರತರದ ಪ್ರಾಣಾಂತ ಶಿಕ್ಷೆಗೂ ಗುರಿಯಾಗಿ ನಿರಂತರ ಅಪಕೀರ್ತಿಗೆ ಭಾಜನಳಾದುದೇ!—ಹೀಗೆ ಇನ್ನೂ ಎಷ್ಟೋ ಸುಂದರಿಯರು ಹಟದಿಂದ ಕೆಟ್ಟುಹೋಗಿರುವರಾದರೂ ಲೇಖನ ವಿಸ್ತಾರಕ್ಕೆ ಭಯಪಟ್ಟು ಅದನ್ನು ಹೇಳಲಾಗದೆ ಇಷ್ಟಕ್ಕೇ ನಿಲ್ಲಿಸಬೇಕಾಗಿರುವುದು.

**ಅಬಲೆಯರ ಈ ವಿಧವಾದ ಅವಿಚಾರಾಂಧತೆಗೆ ಕಾರಣವೆಂದರೆ ಸುಶಿಕ್ಷಾರಹಿತವಾದ ಅವಿದ್ಯೆಯೇ ಕಾರಣವೆನ್ನಬೇಕಾಗಿರುವದು.**

---

## II

## ಆತ್ಮೋನ್ನತಿ—ಮಾನಸಿಕೋನ್ನತಿಗಳಿಗೆ ಆಧಾರವಾದ ವಿದ್ಯಾ ಸ್ವರೂಪವನ್ನು ತಿಳಿಯಬೇಕಾದುದರ ಆವಶ್ಯಕತೆ.

ಮಾನವ ಜನ್ಮಧಾರಣದಲ್ಲಿ ಮುಖ್ಯವಾಗಿರಬೇಕಾದುದೇ ಪ್ರಜ್ಞೆ. ಮನಸ್ಸನ್ನೂ ಇಂದ್ರಿಯಗಳನ್ನೂ ಸ್ವಾಧೀನದಲ್ಲಿಟ್ಟು ಉಚಿತಾನುಚಿತಗಳನ್ನು ತಿಳಿದು, ಭಗವತ್ಸ್ವರೂಪ ಸಂಬಂಧಗಳ ವಿಚಾರಗಳನ್ನು ಅನುಭವ

ಮಾಡಿಕೊಡಲುಳ್ಳ ಬುದ್ಧಿಶಕ್ತಿಯೇ ಪ್ರಜ್ಞೆಯೆನ್ನಿಸುವುದು. ಇದರ ಪೂರ್ವ ಪ್ರಕಾಶವೇ ವಿದ್ಯೆಯೆನ್ನಿಸುವುದು.

ವಿದ್ಯೆಯು ಕೇವಲ ನೈತಿಕ (ನೀತಿಬೋಧೆ) ಶಿಕ್ಷಾರೂಪದ ಅಭ್ಯಾಸದಿಂದಲೇ ಲಭಿಸಬೇಕಲ್ಲದೆ ಸ್ವೇಚ್ಛೆಯಿಂದ ದೊರೆಯದು. ಪ್ರಜ್ಞೆಯು ಮಾನವರಿಗೆ ಜನ್ಮಸಹಜ ಗುಣವಾಗಿದ್ದರೂ ಅದು ಕೇವಲ ಸೂಕ್ಷ್ಮರೀತಿಯಿಂದ ಭೂಮಿಯಲ್ಲಿರುವ ನಿಕ್ಷೇಪದಂತೆ ಅಂತಃಕರಣದಲ್ಲಿ ಅಜ್ಞಾತವಾಗಿರುವುದು. ಇದನ್ನು ಪ್ರಕಾಶಕ್ಕೆ ತರಬೇಕಾದರೆ ಬೋಧನೆ–ಶಿಕ್ಷಣೆ–ಅಭ್ಯಾಸಗಳ ಸಾಧನಗಳು ಆವಶ್ಯಕವು. ಈ ಸಾಧನಗಳಿಗಾದರೋ ಕೇವಲ ಧರ್ಮಶಾಸ್ತ್ರಗಳೇ ಆಧಾರವು. ಈ ಶಾಸ್ತ್ರಗಳೆಂದರೆ, ನಮ್ಮ ಶಾರೀರಕ ಮತ್ತು ಮಾನಸಿಕ ರಚನಾ ಪ್ರಮಾಣಗಳಿಗೆ ತಕ್ಕಂತೆ ವರ್ತಿಸಬೇಕಾದ ರೀತಿಗಳನ್ನೂ ಅವುಗಳು ಕ್ರಮ ಕ್ರಮವಾಗಿ ಬೆಳೆದು ಬಲಿಯುವಾಗಿ ಜನ್ಮೋದ್ದೇಶ ಸಾಫಲ್ಯಗೊಳಿಸುವಂತೆ ಮಾಡುವ ಅಭ್ಯಾಸಕ್ರಮಗಳನ್ನೂ ಸ್ವಾನುಭವ ಪೂರ್ವಕವಾಗಿ ಬೋಧಿಸುವ ಮಹನೀಯರ ಅಮೋಘ ವಾಕ್ಯಗಳಾಗಿ ಅಥವಾ ಶಾಸನಗಳಾಗಿರುವುವು. ಈ ವಾಕ್ಯಗಳು ನಮಗೆ ಕಲ್ಪಾಂತದವರೆಗೂ ಲಭಿಸುತ್ತಿರಬೇಕಾದುದು ಆವಶ್ಯಕವೆಂಬ ಉದ್ದೇಶದಿಂದ ಆ ಮಹನೀಯರು ತಮ್ಮ ಅಮೋಘಶಾಸನಗಳನ್ನು ಸ್ವಂತವಾಗಿಯೂ ಶಿಷ್ಯಪ್ರಶಿಷ್ಯರುಗಳಿಂದಲೂ ಲಿಖಿತ ರೂಪವಾಗಿ ನಮಗಾಗಿ ಅನುಗ್ರಹಿಸಿರುವರು. ಇವನ್ನೇ ಶಾಸ್ತ್ರಗಳೆಂದೂ ನೀತಿಗಳೆಂದೂ ಸೂತ್ರಗಳೆಂದೂ ಹೇಳುವರು. ಇವುಗಳ ಅನುಭವವನ್ನು ಪಡೆಯಬೇಕಾದರೆ ನಮಗೆ ಗುರುಜನರ ಸಹಾಯವೂ ಭಾಷಾಭ್ಯಾಸವೂ ಆವಶ್ಯಕವಾಗಿರುವುವು. ಏಕೆಂದರೆ, ಲಿಖಿತ ರೂಪದಲ್ಲಿರುವುದನ್ನು ಅನುಭವಕ್ಕೆ ತಂದುಕೊಡಲು—ಎಂದರೆ ಕಾಲ ದೇಶ ವರ್ತಮಾನ ಸ್ಥಿತಿಗಳಿಗೆ ಅನುಗುಣವಾಗಿ ತಕ್ಕ ಉದಾಹರಣೆಗಳೊಡನೆ ಅವುಗಳನ್ನು ವಿವರವಾಗಿ ಹೇಳಿ ತೋರಿಸಿ, ಮತ್ತು ಹೃದಯಂಗಮವಾಗುವಂತೆ ಮಾಡಲು, ಗುರುಜನರ—ಎಂದರೆ ಅನುಭವಶಾಲಿಗಳೂ ಕ್ಷಮಾಗುಣ ಸಂಪನ್ನರೂ ವಿದ್ವಾಂಸರೂ ಆದ ಸಮರ್ಥರ ಆಶ್ರಯವನ್ನು ನಾವು ಮೊದಲು ಸಂಪಾದಿಸಬೇಕು. ಆ ಬಳಿಕ, ಲಿಪಿಗಳಿಗೆ ಮೂಲವಾದ ಅಕ್ಷರಜ್ಞಾನ, ಭಾಷಾ ಪರಿಶ್ರಮಗಳನ್ನು ಪಡೆಯಬೇಕು. ಒಟ್ಟಿನಲ್ಲಿ, ಮೇಲೆ ಹೇಳಿದ

ವಿದ್ಯಾ (ದಿಕ್ಪ್ರಕಾಶಕತ್ವವನ್ನು ಹೊಂದಿದ ಪ್ರಜ್ಞೆ) ಲಾಭಕ್ಕೆ ಭಾಷಾಭ್ಯಾಸ, ಶಾಸ್ತ್ರಪರಿಜ್ಞಾನವೇ ಮೂಲವೆಂದು ಹೇಳಿದಂತಾಯಿತು. ಇದನ್ನೇ ವಿದ್ಯೆಯೆಂದು ಈಗ ರೂಢಿಯಾಗಿ ಹೇಳುವರು. ಸೂಕ್ಷ್ಮರೀತಿಯಿಂದ ನೋಡಿದರೆ ನಿಜವಾದ ವಿದ್ಯೆಯೆನ್ನಿಸಬೇಕಾದರೆ, ಸಾರಾಸಾರ ವಿಚಾರಪೂರ್ವಕವಾದ ಪ್ರಜ್ಞೆಯೇ ಆಗಿರುವುದಲ್ಲದೆ ಬರಿಯ ವಾಗಾಡಂಬರದ ಭಾಷಾ ಪ್ರೌಢಿಮೆಯು ವಿದ್ಯೆಯಾಗುವುದಿಲ್ಲ.

ಮೇಲೆ ಹೇಳಿದಂತೆ ಭಾಷಾಭ್ಯಾಸದಿಂದ ಶಾಸ್ತ್ರಪರಿಜ್ಞಾನವನ್ನು ಸಂಪಾದಿಸಬೇಕೆಂದರೆ, ಮೊದಲು ಸ್ವದೇಶ, ಸ್ವಭಾಷೆ—ಎಂದರೆ ತಮ್ಮ ಜನ್ಮಧಾರಣವಾದ ಮತ್ತು ತಾವಿರುವ ದೇಶದಲ್ಲಿ ಪ್ರಚುರವಾಗಿರುವ ಭಾಷೆಯನ್ನು ಕಲಿಯಬೇಕಾದುದೇ ಪ್ರಥಮ ಕಾರ್ಯವು. ಇದನ್ನೇ ಬಾಲ್ಯವಿದ್ಯಾಭ್ಯಾಸವೆಂದು ಹೇಳಬಹುದು. ಈ ಬಾಲ್ಯ ವಿದ್ಯಾಭ್ಯಾಸವು–ಎಂದರೆ ದೇಶಭಾಷಾ ಪರಿಜ್ಞಾನವು ತೃಪ್ತಿಕರವಾಗಿ ಅಭ್ಯಾಸಮಾಡಲ್ಪಟ್ಟ ಬಳಿಕ, ಜೀವಾನಂದಪ್ರದವಾದ ಗೀರ್ವಾಣ ಭಾಷೆಯನ್ನೂ ಆ ಬಳಿಕ ಇತರ ದೇಶೀಯ ಭಾಷೆಗಳನ್ನೂ ತಮ್ಮ ಅವಕಾಶ ಅನುಕೂಲಗಳಿಗೆ ತಕ್ಕಂತೆ ಅಭ್ಯಾಸ ಮಾಡಬಹುದು.

ಈಗ ನಮಗೆಂದರೆ, ದೇಶವು ಕನ್ನಡ ನಾಡು. ನಮ್ಮ ದೇಶಭಾಷೆ (ನಾಡನುಡಿ)ಯೆಂಬರೆ ಕನ್ನಡವು. ಆದುದರಿಂದ ನಮಗೆ ಈ ಕನ್ನಡ ನುಡಿಯೇ ತಾಯ್ನುಡಿ(ಮಾತೃಭಾಷೆ)ಯೆಂದು ಹೇಳಬಹುದು. ಆದುದರಿಂದ ನಾವು ಮೊದಲು ನಮ್ಮ ತಾಯ್ನುಡಿಯ ಪರಿಚಯವನ್ನು ಚನ್ನಾಗಿ ಪಡೆದು, ಆ ಬಳಿಕ ಅದರ ಸಹಾಯದಿಂದ ಇತರ ಭಾಷೆಯ ಪರಿಚಯ ಲಾಭವನ್ನು ಹೊಂದಿ, ತಮ್ಮ ದೇಶದ ಧರ್ಮ, ನೀತಿಗಳನ್ನು ಪ್ರಚುರಗೊಳಿಸಲು ಬೇಕಾದ ಅಂಶಗಳನ್ನು ತಿಳಿದುಕೊಳ್ಳಬೇಕಾದುದು ಪ್ರತಿಯೊಬ್ಬ ಕನ್ನಡಿಗನ—ವಿಶೇಷವಾಗಿ ಕನ್ನಡಿತಿಯರಿಗೂ ಆವಶ್ಯಕವಾಗಿರುವುವು.

ಈ ದೇಶಭಾಷೆಯನ್ನು ಅಲ್ಪವೆಂದು ಹೀನಭಾವನೆಯಿಂದ ನಿರಾಕರಿಸಿ, ಪರಾನುಕರಣ ಮಂತ್ರದಿಂದ ಮುಗ್ಧರಾಗಿ ಮಾಡುವ ವಿದೇಶೀ ಭಾಷೆಯ ಪರಿಶ್ರಮವೇ ಪ್ರೌಢವಿದ್ಯೆಯೆಂದು ಹಿಗ್ಗಿದೆವಾದರೆ ಪ್ರೌಢವಿದ್ಯೆಯನ್ನು

ಕಲಿತವರೆಂಬ ಪ್ರತಿಷ್ಠೆಯನ್ನು ಪಡೆಯಬೇಕೆನ್ನುವ ದುರಭಿಮಾನದ ಹಟವು ನಮ್ಮಲ್ಲಿ ನೆಲೆಗೊಂಡು ಅದರ ಮತ್ತು ತಲೆಗೇರುವುದರಿಂದ ನಮ್ಮ ದೇಶೀಯರ ಆಚಾರ ವಿಚಾರಗಳನ್ನೂ ನಮ್ಮವರ ಕರ್ತವ್ಯ, ಧರ್ಮ, ಧ್ಯೇಯಗಳ ನಿಜಸ್ವರೂಪಗಳನ್ನೂ ತಿಳಿಯಲರಿಯದೆ ಹೋಗಿ, ನಮ್ಮ ಜನ್ಮ ಸಹಜವಾದ ಪ್ರಜ್ಞೆಯ ಬೆಳವಳಿಗೆಯನ್ನು ನಾವೇ ಮುರಿದವರಾಗುವೆವಾದುದರಿಂದ ನಮಗೆ ಮೂರ್ಖತೆಯ (ಅವಿದ್ಯೆಯ) ಪ್ರಥಮ ಸ್ಥಾನವೇ ಲಭಿಸುವುದಲ್ಲದೆ ವಿದ್ಯಾವತಿಯರೆನ್ನಿಸಿಕೊಳ್ಳಲಾರೆವು.

ಮೇಲೆ ಹೇಳಿದ ದುರಭಿಮಾನವು ಎಲ್ಲಿಯವರೆಗೆ ನಮ್ಮಲ್ಲಿ ಇರುವದೋ ಅದುವರೆಗೂ ಸ್ವಯಂಪ್ರಭುತ್ವ ಸ್ಥಾಪನೆಯ ದುರಾಶೆಯೂ ಅದನ್ನೇ ಆಶ್ರಯಿಸಿರುವ ಆತ್ಮಸ್ತುತಿ, ಪರನಿಂದೆ, ಪರದೋಷಾನ್ವೇಷಣೆ, ಮತ್ತತೆಗಳೂ ನಮ್ಮಲ್ಲಿ ಬೀಡುಗೊಂಡಿರುವುವು. ಈ ಕಾರಣದಿಂದಲೇ ಈ ನಮ್ಮ ನಾಡಿನಲ್ಲಿ ನಿಜವಾದ ವಿದ್ಯೆಯು ಪ್ರಚಾರಕ್ಕೆ ಬರಲಾಗದೆ ಬಯಲಾಡಂಬರದ ವ್ಯಾಪಾರಕ್ಕೇ ನಮ್ಮ ನಾಡು ಅಧಿಕ ಭಾಗವನ್ನು ಒಪ್ಪಿಸಿರುವುದು.

ಈ ಅವಿದ್ಯೆಯಿಂದುಂಟಾಗುವ ಸ್ವಯಂಪ್ರಭುತ್ವ ಸ್ಥಾಪನೆಯ ಪ್ರತಿಷ್ಠಾಕಾಮನೆಗೆ ಮುಖ್ಯವಾಗಿ ಅಹಂಭಾವವು ಬೇಕು. ಈ ಅಹಂಬ್ರಹ್ಮತ್ವದಿಂದ—'ನಾನೇ ದೊಡ್ಡವಳು,' 'ಇವೆಲ್ಲವೂ ನನ್ನ ಅದೃಷ್ಟಕ್ಕೊಳಪಟ್ಟುವು?' 'ಇವೆಲ್ಲಕ್ಕೂ ನಾನೇ ಅಧಿಕಾರಿಯಾಗಲುಳ್ಳವಳು—' ಎಂಬೀ ಆಶೋತ್ತರವುಂಟಾಗಿ, ಆಶಾಪೂರಣಕ್ಕೆಂದು ತಾನು ಮಾಡುವ, ಹೇಳುವ ತನ್ನ ಕೃತಿಗೆ ಸಂಬಂಧಪಡುವ ಪ್ರತಿಯೊಂದು ಅಂಶಗಳಲ್ಲಿಯೂ ಸ್ತುತಿ, ಪ್ರಾಶಸ್ತ್ಯ, ವಿಡಂಬನಗಳೂ, ಅವುಗಳ ಸ್ಥಾಪನೆಗಾಗಿ ಪರದೂಷಣೆಯೂ ಅವಶ್ಯಾಚರಣಗಳಾಗುವುವು. ಹೀಗೆ ಮೊದಲು ತಲೆದೋರುವ ಪರನಿಂದೆಯು ಮುಂದೆ ಮುಂದೆ ಹೋದಂತೆಲ್ಲಾ ತಮಗೆ ಪ್ರತಿಯಾಗಿ ಹೇಳುವವರ ವಿಚಾರದಲ್ಲಿ ಆಗ್ರಹ, ಅಸಮಾಧಾನ, ಉದಾಸೀನಗಳೂ, ಆ ಬಳಿಕ ಧಿಕ್ಕಾರವೂ ಪ್ರಯೋಗವಾಗುವುವು. ಅನಂತರ ಇಚ್ಛಾಪೂರ್ಣತೆಯ ಸಲುವಾಗಿ ಮಾಡಲ್ಪಡುವ ಕಾರ್ಯಕ್ಕೆ ಪ್ರತಿಬಂಧಕರಾದವರಲ್ಲಿ ಮಾತ್ಸರ್ಯವುಂಟಾಗುವುದು. ಈ ಮಾತ್ಸರ್ಯದ ಸ್ವಭಾವವು ಬಹು ಭಯಂಕರವಾದುದು.

ಈ ಮಾತ್ಸರ್ಯವು ಪರೋತ್ಕರ್ಷತೆಯನ್ನು ಸಹಿಸುವುದಿಲ್ಲ. ಯಾವಾಗಲೂ ಪರರಮೇಲೆ ಕಲಂಕ—ಆರೋಪಗಳನ್ನು ಕಲ್ಪಿಸುವುದೂ, ಉತ್ಕರ್ಷತೆಯಲ್ಲಿರುವವರನ್ನು ಮೆಟ್ಟಿ ಪಾತಾಳಕ್ಕೆ ತುಳಿದುಹಾಕುವುದಕ್ಕೆ ಹವಣಿಸುವುದೂ ಇದರ ಸಹಜ ಗುಣವು. ಪರಹಿಂಸೆ, ತೇಜೋವಧೆಗಳಿಗೆ ಇದು ಕನಸಿನಲ್ಲಿ ಕೂಡ ಹಿಂದೆಗೆಯುವುದಿಲ್ಲ. ಈ ಮಾತ್ಸರ್ಯದ ಆವೇಶದಿಂದ ಹಿಂದೆ ಎಷ್ಟೋಮಂದಿ ಸ್ತ್ರೀಪುರುಷರು ನಾನಾವಿಧಗಳಾದ ಲೋಕಕಂಟಕ ಕಾರ್ಯಗಳನ್ನು ಮಾಡಿ, ತತ್ಫಲಾನುಭವದ ಘೋರ ನರಕಕ್ಕೆ ಗುರಿಯಾಗಿರುವರು.

ಈ ಮಾತ್ಸರ್ಯವು ಸಾಮಾನ್ಯವಾಗಿ ಸ್ತ್ರೀ ಹೃದಯದಲ್ಲಿಯೇ ಹುಟ್ಟಿರಬೇಕೆಂದು ಅನುಭವಜ್ಞರಾದ ಪಂಡಿತರು ಹೇಳಿರುವರು. ವಿಚಾರಮಾಡುವೆವಾದರೆ ಅದು ನಿಜವಾಗಿಯೇ ಕಾಣುವುದು! ಹೇಗೆಂದರೆ, ಒಂದೇ ಗೃಹರಾಜ್ಯದಲ್ಲಿ ಪುರುಷರು ಅನೇಕರಿದ್ದರೂ ಅವರೆಲ್ಲರೂ ಪರಸ್ಪರ ಸ್ನೇಹಭಾವದಿಂದಲೇ ಇರುವರು. ಅವರಲ್ಲಿ ಗಲಭೆಯೇನೂ ಆಗುವುದಿಲ್ಲ. ಆದರೆ ಒಂದು ಮನೆಯಲ್ಲಿ ಇಬ್ಬರು ಹೆಂಗಸರಿದ್ದರೂ ಗಲಭೆ ತಪ್ಪಲಾರದು;—ಎಂದರೆ ಒಬ್ಬರಮೇಲೊಬ್ಬರು ವಕ್ರದೃಷ್ಟಿಯಿಂದ ನೋಡದಿರುವುದಿಲ್ಲ. ಹೀಗಾಗಲು ಕಾರಣವೇನು?—ಎಂದರೆ ಮೇಲೆ ಹೇಳಿದ ಸ್ವಪ್ರತಿಷ್ಠೆ, ಸ್ವಯಂಪ್ರಭುತ್ವಸ್ಥಾಪನೆಯ ದುರಭಿಮಾನವೇ ಕಾರಣವೆನ್ನಬೇಕಾಗುವುದು.

ಈ ಪ್ರಬಲ ಕಾರಣಗಳಿಂದಲೇ ನಮ್ಮವರಲ್ಲಿ ಯಾರೂ ತಗ್ಗಿ ನಡೆಯದೆ, ಶಠತೆಯಿಂದ ಒಬ್ಬರಲ್ಲಿನ್ನೊಬ್ಬರು ಹೀನಭಾವನೆಯಿಂದಿರುವರು. ಕೆಲವು ಕಡೆಗಳಲ್ಲಂತೂ ದುರಭಿಮಾನದ ಅತಿರೇಕದಿಂದ ಹುಟ್ಟುವ ಮಾತ್ಸರ್ಯ-ಕ್ರೋಧಗಳ ಆವೇಶಗಳಿಂದ ಬೇಗಿ, ಅವಿಚಾರದ ಮದಾಂಧತೆಯಿಂದ ತಮ್ಮ ವಾಸಸ್ಥಳವನ್ನು ಮಾತ್ರವಲ್ಲದೆ ನೆರೆಹೊರೆಯವರಲ್ಲಿ ಕೂಡ ಅನರ್ಥಕಾರಿಗಳಾದ ಗೃಹಚ್ಛಿದ್ರಗಳಿಗೆ ಎಡೆಮಾಡಿ, ಶಾಂತಿ-ಸಂತೋಷಗಳಿಗೆ ನೆಲೆಯಾಗಿರಬೇಕಾದ ಗೃಹರಾಜ್ಯವನ್ನು ಕಲಹ-ಪೀಡಾ-ಹತ್ಯಗಳೇ ಮೊದಲಾದುವುಗಳಿಗೆ ಗುರಿಗೈದು, ಶ್ಮಶಾನವನ್ನಾಗಿಮಾಡಿ, ಮಾಡುತ್ತಿರುವರೆಂದರೆ ತಪ್ಪಾಗದು! ಇಂತಹ ಭಯಂಕರ ಶ್ಮಶಾನ ಸದೃಶವಾದ ಕಲಹ

ಕಲುಷಿತ ಸಂಸಾರಗಳು, ದಿನಂಪ್ರತಿಯೂ ಅನೇಕರ ದೃಷ್ಟಿಪಥಕ್ಕೆ ಬೀಳು ತ್ತಿರುವುವೆಂಬುದು ಎಷ್ಟು ಮಾತ್ರಕ್ಕೂ ಅತ್ಯುಕ್ತಿಯಾಗಲಾರದು !

ಮೇಲೆ ಹೇಳಿದ ಅನರ್ಥಕಾರಿಣಿಯರು ಬಾಲ್ಯದಿಂದಲೂ ಅಶಿಕ್ಷಿತೆಯ ರಾಗಿ—ಎಂದರೆ ತಮ್ಮ ಕುಲ, ಮತ, ಸ್ವರೂಪ, ಧರ್ಮಗಳಿಗೆ ಅನುಗುಣ ವಾದ ನೈತಿಕ ಶಿಕ್ಷಣೆಗೆ ಒಳಪಡದೆ, ಬಾಲ್ಯದಿಂದ ಸ್ವೇಚ್ಛೆಯಾಗಿ ಬೆಳೆದು ಅವಿವೇಕಾಂಧರಾಗಿರುವವರು ವಿನಾ ಬಾಲ್ಯದಿಂದಲೂ ಗುರುಜನರ ನೈತಿಕ ಮತ್ತು ಉದಾತ್ತ ವಿಚಾರಗಳಿಂದ ಸುಶಿಕ್ಷಿತೆಯರೂ ಪ್ರಜ್ಞಾವತಿಯರೂ ಆದ ಕುಲವಧೂಮಣಿಯರು, ಮೇಲೆ ಹೇಳಿದ ದೌರ್ಜನ್ಯ ದೌರ್ಭಾಗ್ಯ ಗಳಿಗೆ ಎಷ್ಟು ಮಾತ್ರಕ್ಕೂ ಕಾರಣರಾಗುವುದಿಲ್ಲ! ಇವರು ತಮ್ಮ ಕುಲ, ಧರ್ಮ ಸ್ವರೂಪ, ಕರ್ತವ್ಯ, ಮಾನಧನಗಳಿಗೆ ಸ್ವಲ್ಪವೂ ಹಾನಿತಟ್ಟದಂತೆ ಜಾಗ್ರುತ-ಸ್ವಪ್ನ-ಸುಷುಪ್ತಿಗಳಲ್ಲಿಯೂ ಎಚ್ಚರಿಕೆಯುಳ್ಳವರಾಗಿದ್ದು, ತಮ್ಮ ಸೌಶೀಲ್ಯ, ಗಾಂಭೀರ್ಯ, ಮಾಧುರ್ಯ, ಸತ್ಯಸಂಧತೆ, ವಿವೇಚನೆಗಳೇ ಮೊದಲಾದ ಉತ್ತಮೋತ್ತಮ ಗುಣಗಳಿಂದ ಜಗತ್ಪೂಜಿತೆಯರಾಗಿರುವರು. ಮೇಲಿನ ಅನರ್ಥ ಕಲಹಗಳನ್ನು ಶಮನಗೊಳಿಸುವುದರಲ್ಲಿ ಕೂಡ ಈ ನಮ್ಮ ಆರ್ಯಮಹಿಳೆಯರು ಸಂದರ್ಭಾನುಸಾರ ದಕ್ಷತೆಯನ್ನು ಪ್ರದರ್ಶಿಸುತ್ತಿರು ವರು. ಇಂತಹ ಸಾಧ್ವೀಮಣಿಯರೇ ನಮ್ಮ ದೇಶಕ್ಕೆ ಅಲಂಕಾರ ಸ್ವರೂಪಿಣಿಯರು. ಇವರೇ ನಮ್ಮ ದೇಶದ ಸಂಪದ್ ವೈಭವಂಗಳ ಉನ್ನತಿಗೆ ಆಧಾರ ಪಾತ್ರರು. ಇವರೇ ನಿಜವಾದ ನಾರೀ ಶಬ್ದ ಧಾರಣಕ್ಕೆ ಅರ್ಹರಾದ ವರು. ಇಂತಹ ಸಾರ್ಥಕ್ಯನಾಮ ಸಂಶೋಭಿತೆಯರಾಗಿ ಜಗತ್ಕಲ್ಯಾಣ ಕರ್ತ್ರಿಯರಾಗಿರುವ ನಾರೀಮಣಿಯರೆಲ್ಲರಿಗೂ ನಮ್ಮ ನಿರಂತರ ಕೃತಜ್ಞತಾ ಪೂರ್ವಕವಾದ ಧನ್ಯವಾದಗಳು !

ಅವಿವೇಕದಿಂದ ಮದಿಸಿದ ಹೆಂಗಸರಲ್ಲಿ ಲಜ್ಜಾ, ಮಾನ, ಭಯ, ವಿನಯಗಳಲ್ಲಿ ಒಂದೂ ಇರುವುದಿಲ್ಲ. ಸ್ತ್ರೀಜಾತಿಗೆ ಆವುವು ಮುಖ್ಯ ಆಧಾರವೋ, ಆವುದು ಪರದೈವಸ್ವರೂಪವೋ ಅಂತಹ ಪತಿಯ ವಿಷಯದಲ್ಲಿ ಕೂಡ ಮೇಲಿನ ಮದೋನ್ಮತ್ತತೆಯು ಹೀನ ಮತ್ತು ಉದಾಸೀನ ಭಾವನೆ ಗಳನ್ನೇ ಹುಟ್ಟಿಸುವುದರಿಂದ ಪತಿಯ ಸಹಚರ್ಯೆಯಾಗಲಿ, ಮರ್ಯಾದಾ ವಿಷಯದಲ್ಲಿಯಾಗಲಿ, ಪರಾಙ್ಮುಖರನ್ನಾಗಿಯೇ ಮಾಡುವುದು. ಇವರು

ಮನಃಪೂರ್ವಕವಾಗಿಯೇ ಹೀಗೆ ನಡೆಯುವರೆಂದು ನಾವು ಹೇಳಲಾರೆ ವಾದರೂ ಉಚಿತಾನುಚಿತ ಪ್ರಜ್ಞೆಯನ್ನು ಕಳೆದುಕೊಂಡು, ಇಂದ್ರಿಯಗಳ ವೇಗಕ್ಕೆ ವಶೀಭೂತರಾಗಿ ಹೀಗೆ ನಡೆಯುವರೆಂದು ಹೇಳದಿರಲಾರೆವು. ಏಕೆಂದರೆ, ಮನಸ್ಸು, ಇಂದ್ರಿಯಗಳೆಂಬ ಅಶ್ವಗಳಿಂದ ಸಜ್ಜೀಕೃತವಾಗಿರುವ ಒಂದು ರಥವಾಗಿರುವುದು. ಈ ರಥವನ್ನೂ ಅಶ್ವಗಳನ್ನೂ ನಡೆಯಿಸು ವಾತನೇ—"ಬುದ್ಧಿ"ಯೆಂಬ ಸೂತನು. ಈ ಸೂತನ ವಿಚಾರಣೆಗೆ ಒಳಪಟ್ಟಿರಬೇಕಾದುದೇ ರಥ ಮತ್ತು ಇಂದ್ರಿಯಗಳಿಗೆ ಶ್ರೇಯಸ್ಕರವೂ ಆವಶ್ಯಕವೂ ಆದ ಕರ್ತವ್ಯವು. ಈ ಸೂತನಿಗೂ ರಥ-ಅಶ್ವಗಳಿಗೂ ಅಧಿಕಾರಿ ಯಾದವನೇ ಸದಸದ್ವಿವೇಕಸಂಪನ್ನನಾದ ಜ್ಞಾನದೇವನು. ಈ ರಥಿಕನಿಲ್ಲ ದಿದ್ದರೆ ಸೂತನು ರಥವನ್ನು ಎಲ್ಲಿಗೆ ನಡೆಯಿಸಬೇಕು ? ಎಲ್ಲೆಲ್ಲಿ ಹೋಗಬೇಕು ? ರಥವನ್ನು ನಡೆಯಿಸುವ ಉದ್ದೇಶ ಪ್ರಯೋಜನಗಳೇನು ? ಎಂಬಿವನ್ನು ತಿಳಿಯಲು ಅಸಮರ್ಥನಾಗಿ ಜಡಭಾವವನ್ನು ಹೊಂದುವನು. ಆದುದರಿಂದಲೇ 'ಬುದ್ಧಿ'ಎಂಬ ಸೂತನಿಗೆ ಜ್ಞಾನವೆಂಬ ರಥಿಕನ ಆಶ್ರಯವಿರಬೇಕಾಯಿತು. ಈ ಸೂತನು ರಥಿಕನ ಆಶ್ರಯದಿಂದ ಉತ್ಸಾಹಿತನಾಗಿ ಯಜಮಾನನ ಆಜ್ಞಾಬಲದಿಂದ ರಥ ಮತ್ತು ತುರಗಗಳ ಸ್ವಾಮಿತ್ವವನ್ನು ತನ್ನ ಅಧೀನ ಮಾಡಿಕೊಂಡನಾದರೆ ನಿರ್ದಿಷ್ಟ ಸ್ಥಾನವನ್ನು ಸುಖರೂಪದಿಂದ ಹೊಂದ ಬಹುದು. ಹಾಗಿಲ್ಲದೆ ರಥಿಕನು ದುರ್ಬಲನಾಗಿ ಅಳಿದರೆ, ಸಾರಥಿಯು ಬಲಿಷ್ಠ ನಾಗಿದ್ದು ಕೂಡ ಸುಖಿಯಾಗಲಾರನು; ರಥಿಕನು ನಷ್ಟವಾದುದನ್ನು ನೋಡಿ, ದುರ್ವಿಷಯಗಳೆಂಬ ಶತ್ರುಗಳು ಸಾರಥಿಯನ್ನೂ ನಾಶಗೊಳಿಸಿಬಿಡುವುವು. ಹಾಗೆ ಸೂತನೂ ನಾಶವಾದ ಬಳಿಕ ಸ್ವೇಚ್ಛೆಯಾಗಿ ತಿರುಗುವ ಅಶ್ವಗಳು ಹಳ್ಳಕೊಳ್ಳಗಳೆನ್ನದೆ ಏರುತಿಟ್ಟುಗಳೆನ್ನದೆ, ಗುಡ್ಡಕಾಡುಗಳೆನ್ನದೆ ಕಂಡ ಕಂಡಲ್ಲಿಗೆಲ್ಲಾ ಈ ರಥವನ್ನು ಎಳೆದೊಯ್ಯುತ್ತ ತಮ್ಮ ವೇಗಕ್ಕೆ ಸಿಕ್ಕಿದ ರಥವು ನುಚ್ಚುನುಚ್ಚಾಗಿ ಹೋಗುವಂತೆ ಮಾಡಿ ಕಡೆಗೆ ತಾವೂ ಅನೇಕ ಉಪಹತಿಗೆ ಸಿಕ್ಕಿ ನಾಶವಾಗುವುವು. ಎಂದರೆ, ಇಲ್ಲಿ ನಾವು ತಿಳಿಯ ಬೇಕಾದ ವಿಚಾರವಿಷ್ಟು; ಕರ್ಮೇಂದ್ರಿಯಗಳೆಂಬ ಅಶ್ವಗಳಿಂದ ಸಜ್ಜೀಕೃತ ವಾದ ಮನಸ್ಸೆಂಬ ರಥವನ್ನು ಸೂತಕಾರ್ಯ ಕುಶಲನಾದ ಬುದ್ಧಿಯ ಸಾರಥ್ಯ ಕ್ಕೊಳಪಡಿಸಿ ಆ ಮೂಲಕ ಸದಸದ್ವಿವೇಕ ಜ್ಞಾನವನ್ನು ಹೊಂದುವುದೇ

ಪ್ರತಿಯೊಬ್ಬ ಸ್ತ್ರೀಪುರುಷರಿಗೂ ದೈವಸಿಯಾಮಕವಾಗಿರುವುದು. ಹಾಗೆ ಮಾಡುವ ಮಹನೀಯರೇ ಪಂಡಿತರು ಅಥವಾ ವಿದ್ವಾಂಸರು. ಇಂತಹ ಆತ್ಮವಿಚಾರಪರರಲ್ಲಿಯೇ ನಿರ್ಮಲವಾದ ಆನಂದವು ನೆಲೆಗೊಂಡಿರುವುದು. ಈ ಆನಂದಕ್ಕೆ ಸ್ತ್ರೀಪುರುಷರೆಲ್ಲರೂ ಅಧಿಕಾರಿಗಳು.

ಸದ್ಯಃಸ್ಥಿತಿಯಲ್ಲಿ ಈ ಆನಂದವು ನಮ್ಮ ಮಹಿಳೆಯರಲ್ಲಿ ಬಹು ಮಂದಿಯ ಪಾಲಿಗೆ ಸ್ವಪ್ನೇಪಿ ದುರ್ಲಭವಾಗಿರುವುದು. ಅವರು ಆಲಸ್ಯಾದಿ ದುಷ್ಟ ರೋಗಗಳಿಗೆ ಎಡೆಗೊಟ್ಟು ಅಮೋಘವಾದ ತಮ್ಮ ಕಾಲಧನವೆಲ್ಲ ವನ್ನೂ ಲೀಲಾವಿನೋದಾದಿ ಕೇವಲ ಕ್ಷುಲ್ಲಕ ವ್ಯಾಪಾರದಲ್ಲಿಯೇ ಕಳೆದು ಕೊಳ್ಳುತ್ತ ತಮ್ಮ ಮನಶ್ಯಾಂತಿಗೆ ಭಂಗತಂದುಕೊಳ್ಳುವರಲ್ಲದೆ ದೇಶಕ್ಕೂ ದೇಶೋದ್ಧಾರಕ ವ್ರತದಲ್ಲಿ ಬದ್ಧದೀಕ್ಷರಾಗಿರುವ ಮಹನೀಯರ ಉತ್ಸಾ ಹಕ್ಕೂ ಹಲವು ವಿಧದ ವಿಘ್ನಗಳನ್ನುಂಟುಮಾಡುತ್ತಿರುವರೆಂದರೆ ಎಷ್ಟು ಸಂಕಟವಾಗಬಹುದೋ ವಿಚಾರಪರರಾದ ನಮ್ಮ ಸೋದರಿಯರೇ ವಿಮರ್ಶಿಸಬೇಕು.

"ಹಾಡಿಗಿಂತ ಹರಟೇ ಲೇಸು" ಎಂಬ ಗಾದೆಯನ್ನು ಹೇಳುತ್ತ, ಇವರು ಈ ಬಗೆಯ ವ್ಯರ್ಥಾಲಾಪದಲ್ಲಿಯೇ ಎಂದರೆ ಆವ ಕೆಲಸಕ್ಕೂ ಬಾರದೆ ಬರಿಯ ಮನೋವಿಕಲ್ಪಕ್ಕೆ ಮಾತ್ರ ಕಾರಣಗಳಾಗುವ ಈ ಕಾಡು ಹರಟೆಗಳಲ್ಲಿಯೇ ಮನಸ್ಸಿಟ್ಟು ಒಬ್ಬರನ್ನು ಇನ್ನೊಬ್ಬರು ಸೋಲಿಸ ಬೇಕೆಂಬ ಹುರುಡುಳ್ಳವರಾಗಿರುವರು. ಇವರಿಗೆ ಅದರಿಂದುಂಟಾಗುವ ಕಷ್ಟನಷ್ಟ-ನಿಷ್ಠುರಗಳಾವುವೆಂಬುದನ್ನು ತಿಳಿಯುವಷ್ಟು ವಿವೇಚನೆಯಿರುವು ದಿಲ್ಲ. ಕಷ್ಟ ಬಂದು ಸಂಕಟಪಡುವ ಕಾಲದಲ್ಲಿ ಕೂಡ ಕಂಡಕಂಡವರ ಮೇಲೆ ತಪ್ಪುಗಳನ್ನು ಹೊರಿಸುವುದು, ತಮ್ಮ ಅದೃಷ್ಟವೇ ಸರಿಯಾಗಿಲ್ಲವೆಂದೂ, ನಿರ್ಭಾಗ್ಯರಾದ ತಮಗೆ ದೈವವೂ ನಿಷ್ಠುರವಾಗಿ ತಿರುಗಿರುವದೆಂದೂ, ತಮ್ಮನ್ನೂ ದೈವವನ್ನೂ ಕೂಡಿಸಿ ಬಯ್ಯುವುದು—ಇಷ್ಟು ಮಾತ್ರವೇ ಗೊತ್ತಾಗುವುದಲ್ಲದೆ 'ತಮ್ಮ ಕರ್ಮಕ್ಕೆ ಇದು ತಪ್ಪದ ಫಲಾನುಭವ'ವೆಂದು ತೋರುವುದು ದುರ್ಘಟವು! ಇದಕ್ಕೆ ದೃಷ್ಟಾಂತಗಳನ್ನು ಕೇಳುವವರು ಬಹು ದೂರ ಹೋಗಬೇಕಾಗಿಲ್ಲ. ಸಾಧಾರಣವಾಗಿ ಇಂತಹ ಹರಟೆಮಲ್ಲೆಯರ

ಗುಂಪು ಅನೇಕರ ಮನೆಬಾಗಿಲ ಮುಂದೆಯೇ ಸೇರುತ್ತಿರುವುದನ್ನು ನಮ್ಮ ವಾಚಕರಲ್ಲಿ ಅನೇಕರು ನೋಡಿರಬಹುದು. (ಒಂದೆರಡು ವೇಳೆ ತಾವೂ ಸೇರಿದ್ದರೂ ಇರಬಹುದು.) ಹೀಗೆ ಸೇರುವ ಸಂಘದಲ್ಲಿ ಅವರು ಚರ್ಚಿಸುವ ವಿಷಯಗಳೇನೆಂಬುದು ಕೂಡ ತಿಳಿದ ವಿಚಾರವೇ ಆಗಿರುವುದು. ಸಾಮಾನ್ಯವಾದ ಹಳ್ಳಿ ಗ್ರಾಮಗಳಲ್ಲಿ ಶ್ರೀಮದ್ಗಂಭೀರಸಂಪನ್ನರಾದ ಪುರುಷ ಬಂಧುಗಳು ಕೂಡ ಈ ಮಹಿಳಾಮಂಡಲಿಗೆ ಉಪಶಾಖೆಯನ್ನೇರ್ಪಡಿಸಿಕೊಂಡು ಮೇಲಿನ ಸ್ತ್ರೀ ಸಂಘದಲ್ಲಿ ನಡೆಯುವ ವಿಚಾರಗಳ ವಿಮರ್ಶೆಯನ್ನು ಮಾಡುವದು, ವಿಶೇಷವಾಗಿ ನೃತ್ಯ, ಗೀತ, ದ್ಯೂತ ಪ್ರಸಂಗಗಳೇ ಮೊದಲಾದ ಮಹಾಕಾರ್ಯಗಳನ್ನು ನಡೆಯಿಸುತ್ತಿರುವುದನ್ನು ಕೂಡ ನಾವು ನೋಡಿ—ನೋಡಬಹುದಾಗಿದೆ. ಇಲ್ಲಿ ನಮಗೆ ಪುರುಷರ ವಿಚಾರವು ಅಷ್ಟು ಅಗತ್ಯವಾಗಿಲ್ಲ. ಮೊದಲು ನಮಗೆ ಬೇಕಾದುದು ನಮ್ಮ ಸ್ತ್ರೀಯರನ್ನು ನುಂಗುತ್ತಿರುವ ದೌರ್ಜನ್ಯವನ್ನು ನಿವಾರಣಮಾಡಿಕೊಳ್ಳುವಂತಹ ವಿಚಾರವಷ್ಟೇ ನಮ್ಮ ಗುರಿಯಾಗಿರುವುದರಿಂದ ಮೊದಲು ಸ್ತ್ರೀ ಸಮಾಜದ ವಿಚಾರವನ್ನೇ ಪ್ರಸ್ತಾಪಿಸುವೆವು.

ಶುಷ್ಕಪ್ರಸಂಗಪ್ರಿಯರಾದ ಮೇಲಿನ ಸಂಘದ ಯುವತಿಯರು, ಮೊದಲು ಪ್ರಸ್ತಾಪಿಸುವ ವಿಷಯಗಳೆಂದರೆ, ಬಹುವಾಗಿ—ಜನರ ರೂಪ-ವಯಸ್ಸು, ಸುಕುಮಾರತೆಗಳು ; ಆ ಬಳಿಕ, ಅವರ ಆಕಾರ-ವಿಕಾರ, ಆಚಾರ-ವ್ಯವಹಾರಗಳು—ಇವುಗಳಿಗೆ ಸಂಬಂಧಪಟ್ಟ ವಿಚಾರವು! ಈಗ ನಾವು ಆವ ವಸ್ತುವಿನಲ್ಲಿಯಾಗಲೀ ದೋಷಗಳನ್ನೇ ಹುಡುಕುತ್ತ ಹೋದರೆ ಆವುದಾದರೂ ದೋಷವು ನಮಗೆ ಕಂಡುಬಂದೇ ಬರುವುದು. ಒಂದುವೇಳೆ ತಪ್ಪುಕಾಣಲಿಲ್ಲವೆಂದರೂ, ಉದ್ದೇಶ ಸಾಫಲ್ಯಕ್ಕಾಗಿ ಪ್ರಯತ್ನಪಟ್ಟಾದರೂ ಇಲ್ಲದ ಸಲ್ಲದ ಸುಳ್ಳನ್ನು ಕಲ್ಪಿಸಿ ಹೇಳುವುದು ಸ್ವಪ್ರತಿಷ್ಠಾಕಾಮಿಗಳ ಸ್ವಭಾವವಾಗಿರುವುದು. ಹೀಗಿರುವುದರಿಂದ ಇಂತಹ ಪ್ರತಿಷ್ಠಾಕಾಮಿಗಳ ಮಾತ್ಸರ್ಯ ಕ್ರೋಧಗಳಿಗೆ ಗುರಿಯಾಗುವ ನಮ್ಮ ಇತರ ಸೋದರೀಮಣಿಯರು ನಿರ್ದೋಷಿಗಳಾಗಿದ್ದು ತಮ್ಮ ಕರ್ತವ್ಯ—ಧರ್ಮ—ಮಾನ—ಕೀರ್ತಿಗಳಿಗೆ ಕುಂದಕವನ್ನುಂಟುಮಾಡುವ ಇಂತಹ ಅಧಿಕಪ್ರಸಂಗದಲ್ಲಿ ಸೇರದಿರುವದೊಂದೇ ದೋಷ—ಅಥವಾ ಮಹಾಪರಾಧಕ್ಕಾಗಿ ಮೇಲ್ಕಂಡವರ

ಆಗ್ರಹದಿಂದ ಹುಟ್ಟಿದ ಮಿಥ್ಯಾಪವಾದಾಗ್ನಿಗೆ ಸಿಕ್ಕಿ ಕಂದಿ ಕುಂದಿ ಹೋಗು ತ್ತಿರುವ ವಿಚಾರವು ಎಷ್ಟು ಸಮಾಧಾನಕರವಾಗಿರುವುದೋ ಕೋಮಲ ಹೃದಯರೆನಿಸಿದ ಮಹಿಳೆಯರೇ ಊಹಿಸಿ ತಿಳಿದು ತಕ್ಕ ಪ್ರತೀಕಾರೋ ಪಾಯವನ್ನು ಚಿಂತಿಸಲಿ!

---

## III

## ಸ್ವಪ್ರತಿಷ್ಠಾಕಾಮಿಗಳಿಗೆ ಸ್ವಜನರಲ್ಲಿ ಉಂಟಾಗುವ ಈರ್ಷ್ಯಾಸೂಯೆಗಳೂ ಅದರ ಪರಿಣಾಮವೂ.

ಹಿಂದೆ ಹೇಳಿದಂತೆ ಪ್ರತಿಷ್ಠಾಕಾಮಿಗಳಾಗಿರುವ ಅಂಗನೆಯರಿಗೆ ತಮ್ಮ ಸ್ವಪ್ರತಿಷ್ಠಾ ಸ್ಥಾಪನೆಗೆ ಆತಂಕವನ್ನುಂಟುಮಾಡುವರೆಂಬ ದುರ್ಭಾ ವನೆಯು ಮೊದಲು ಸ್ವಜನರಲ್ಲಿ ಉಂಟಾಗುವುದು. ಇದೇ ಬರುಬರುತ್ತ ಈರ್ಷ್ಯಾ—ಅಸೂಯಾ—ದ್ವೇಷರೂಪಗಳನ್ನು ಹೊಂದಿ, ಈ ಮೂರೂ ಗುಣಗಳ ಸಮಾವೇಶದಿಂದ ಕೂಡಿದ ಮಹತ್ತರವಾದ ಮಾತ್ಸರ್ಯದ ರೂಪಕ್ಕೆ ಬರುವುದು—ಈ ಮಾತ್ಸರ್ಯದ ಮಹಿಮೆಯು ಹಿಂದೆ ಸಂಗ್ರಹವಾಗಿ ಹೇಳಲ್ಪಟ್ಟಿರುವುದಷ್ಟೆ? ಇರಲಿ; ಮೊದಲು ಸ್ವಜನರಲ್ಲಿ ಅಸೂಯಾದಿ ಗಳುಂಟಾಗುವ ಬಗೆ ಹೇಗೆಂಬುದನ್ನು ಮೊದಲು ಉದಾಹರಣೆಯೊಡನೆ ಮುಂದಿಟ್ಟು ಆ ಬಳಿಕ ಮುಂದೆ ಸಾಗುವ.

ಒಂದು ಮನೆಯಲ್ಲಿ ನಾಲ್ಕಾರುಮಂದಿ ಗಂಡಸರೂ, ನಾಲ್ಕಾರು ಮಂದಿ ಹೆಂಗಸರೂ ಇರಬಹುದು. ಇದ್ದರೆ ಇವರೆಲ್ಲರ ಚಿತ್ತವೃತ್ತಿಯೂ ಒಂದೇ ವಿಧವಾಗಿರಲಾರದು. ಎಂದರೆ ಕೆಲವರು ವಿದ್ಯಾಭ್ಯಾಸವನ್ನು ದ್ವೇಷಿಸುವರು. ಕೆಲವರು ವಿದ್ಯಾಭ್ಯಾಸವನ್ನು ಆಶಿಸುವರು. ಇನ್ನು ಕೆಲವರು ತಟಸ್ಥವೃತ್ತಿಯಲ್ಲಿರುವರು. ಮತ್ತೆ ಒಬ್ಬಿಬ್ಬರು ಕೆಲಸಗಳಲ್ಲಿಯೇ ಆಸಕ್ತರು. ಉಳಿದವರು, ಕೇವಲ ಅಧಿಕಪ್ರಸಂಗದ ಕಾಲಹರಣದಲ್ಲಿಯೇ ತತ್ಪರರು. ಹೀಗಿರುವುದರಿಂದ ಅವರೆಲ್ಲರ ಅಭಿಮತವೂ ಐಕ್ಯವಾಗಿರುವ

ದೆಂತು? ಐಕ್ಯವಿಲ್ಲದಮೇಲೆ ಸಾಮರಸ್ಯ ಅಥವಾ ಸಮಾಧಾನದ ಮಾತೆಲ್ಲಿ? ಇವೆರಡೂ ಇಲ್ಲವಾಯ್ತಷ್ಟೆ?

ಇಲ್ಲಿ ಪ್ರಸಂಗಪ್ರಿಯರಾದ ಮಹಿಳೆಯರಲ್ಲಿ ಬಹುಶಃ ಸ್ವಪ್ರತಿಷ್ಠೆ, ಸ್ವಯಂಪ್ರಭುತ್ವಗಳ ಗರ್ವವೇ ತುಂಬಿರುವದರಿಂದ ಅವರು ಮತ್ತಾವ ಕಾರ್ಯಕಲಾಪಗಳಲ್ಲಿಯೂ ಅಷ್ಟು ಗಮನಿಸುವುದಿಲ್ಲ. ಅವರು ಸಮಯ ವಾದಾಗಲೆಲ್ಲ, ಆತ್ಮಪ್ರಶಂಸೆಯನ್ನೇ ಮುಂದುಮಾಡಿಕೊಂಡು ಹರಟೆ ಯಲ್ಲಿಯೇ ಕಾಲಕಳೆಯಬೇಕೆಂದಿರುವುದರಿಂದ ತಮ್ಮನ್ನು ಗೃಹಕಾರ್ಯಗಳಲ್ಲಿ ನಿಯೋಜಿಸುವರ ಮೇಲಾಗಲೀ, ಇಲ್ಲವೆ—ಇಂತಹ ಕಾಡುಹರಟೆಯು ಕೂಡದೆಂದು ನಿಷೇಧಿಸುವರ ಮೇಲಾಗಲೀ, ಮತ್ತೆ, ಪ್ರಾಪಂಚಿಕ ಪಾರ ಮಾರ್ಥಿಕ ತತ್ವಗಳನ್ನು ತಿಳಿದು ಸಾಧ್ಯವಾದಷ್ಟು ಮಟ್ಟಿಗೂ ಸ್ತ್ರೀಜನ್ಮ ಧಾರಣೆಯು ಸಾರ್ಥಕ್ಯತೆ ಹೊಂದಲು, ಸ್ತ್ರೀಯರ ಪಾಲಿಗೆ ಬಿದ್ದಿರುವ ಮಹತ್ತರವಾದ ಕರ್ತವ್ಯವನ್ನು ಪಾಲಿಸಿ, ತಮ್ಮ ಮುಂದಿನ ಹೆಣ್ಣುಮಕ್ಕ ಳಿಗೂ ಬುದ್ಧಿಗಲಿಸುವಂತಹರಾಗಬೇಕೆಂದು ಬೋಧಿಸುತ್ತ ಕಿವಿಗೆ ಉಪದ್ರವವನ್ನುಂಟುಮಾಡುತ್ತಲಿರುವವರಲ್ಲಿ, ಇನ್ನೂ ಇದೇ ಬಗೆಯಾಗಿ ಇಲ್ಲವೆ ಬೇರೆಯಾಗಿ ತಮ್ಮ ಹರಟೆಗೆ ಅಡ್ಡಿಯಾಗಿ ಬರುವ ಅಣ್ಣ ತಮ್ಮ, ಅಕ್ಕ ತಂಗಿ ಕಡೆಗೆ, ತಂದೆ ತಾಯಿ (ಮತ್ತೂ ಮುಂದೆ ಬಂದರೆ ಅತ್ತೆ ಅತ್ತಿಗೆ ನಾದಿನಿ ಮೊದಲಾದವರ ಮಾತಂತೂ ಹಾಗಿರಲಿ, ಮಾವ-ಗಂಡ —ಇವರ ವಿಷಯದಲ್ಲಿ ಕೂಡ ಪ್ರತ್ಯಕ್ಷ ಪರೋಕ್ಷಗಳಲ್ಲಿ ನಿಷ್ಠುರವಾಡು ವುದು, ಹೆರವರಲ್ಲಿ ದೂರಿ, ಮೇಲ್ಕಂಡವರ ಮಾನಹಾನಿಯಾಗುವಂ ತೆಸಗುವುದು ಎಷ್ಟೋ ಕಡೆಗಳಲ್ಲಿ ಕಂಡುಬರುತ್ತಲಿರುವುದು) ಮೊದಲಾದ ತಮ್ಮ ಸ್ವಜನರಲ್ಲಿ ಇವರಿಗೆ ಆಗ್ರಹವುಂಟಾಗುವುದೂ, ಈ ಆಗ್ರಹದಿಂದ ಅವರು ಮರ್ಯಾದೆ ಮೀರಿ ಮೇಲ್ಕಂಡವರಿಗೆ ಪ್ರತಿಯಾಗಿ ನುಡಿದು ನಡೆಯು ತ್ತಿರುವುದೂ ಅನೇಕ ಮಂದಿ ನಮ್ಮ ಸೋದರೀ ಸೋದರರ ಅನುಭವವೇದ್ಯ ವಿಷಯವಾಗಿದೆಯಷ್ಟೆ?

ಪ್ರಾರಂಭದಲ್ಲಿ ತೋರಿಬರುವ ಈ ಆಗ್ರಹವೂ, ಆಗ್ರಹವನ್ನೇ ಆಶ್ರಯಿಸಿ ಕೊಂಡಿರುವ ಅಸಮಾಧಾನವೂ ಮುಂದು ಮುಂದಕ್ಕಡಿಯಿಟ್ಟಂತೆಲ್ಲ ಇವರ

ಮಾರ್ಗಾನುಯಾಯಿಗಳಾಗಿರುವ ಈರ್ಷ್ಯಾಸೂಯೆಗಳು ಇವರಲ್ಲಿ ತಮ್ಮ ಪ್ರಾಬಲ್ಯವನ್ನು ತೋರ್ಪಡಿಸುವುವು. ಇವುಗಳ ಪ್ರಾಬಲ್ಯದಿಂದ ಪರವಶರಾದವರು ಮೇಲೆ ಹೇಳಿದಂತೆ ಮನೆಯವರಲ್ಲಿ ಅನ್ಯಥಾ ಭಾವನೆಯನ್ನೇ ಹೊಂದಿ ನಿರ್ದಾಕ್ಷಿಣ್ಯದಿಂದಲೂ, ನಿಷ್ಠುರತೆ ನಿರ್ಲಜ್ಜತನದಿಂದಲೂ, ಮರ್ಯಾದೆ ಮೀರಿದ ಕೋಪತಾಪಗಳಿಂದಲೂ, ಇಲ್ಲದೊಂದು ಕಾರಣವನ್ನು ಕಲ್ಪಿಸಿ—ಕಲಹ, ಪೀಡೆ, ರೋದನಗಳಿಂದ ಸಂಸಾರವನ್ನು ಭಯಂಕರವಾಗುವಂತೆ ಮಾಡುವರು. ಇದಕ್ಕೆ ಉದಾಹರಣೆಯಾಗಿ ಹೇಳಬೇಕೆಂದು ನಾವು ಯೋಚಿಸುತ್ತಿರುವಾಗಲೇ ನಮ್ಮ ದೃಶ್ಯಕ್ಕೆ ಒಳಪಟ್ಟ ಒಂದೆರಡು ವಿಷಯಗಳನ್ನು ಮುಂದಿಟ್ಟರೆ ಸಾಕಷ್ಟೆ?

ಒಬ್ಬ ವೃದ್ಧ ಸ್ತ್ರೀಯು, ಚಾಡಿಕಾರರ ಮಾತನ್ನು ನಂಬಿ ಮಗಳ ಮನೆಗೆ ಬಂದು, ಆವೇಶದಿಂದ ಸ್ಮೃತಿಕೂಡ ಇಲ್ಲವೆಂಬ ರೀತಿ, ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನೂ ಮಗಳ ಮಕ್ಕಳನ್ನೂ ನಿಷ್ಕಾರಣವಾಗಿ ಬಯ್ದು (ಬಯ್ಗಳೆಂದರೆ ಸಾಮಾನ್ಯವಲ್ಲ, ಮಗಳು ಸತ್ತು ತಾನು ಹಾಯಾಗಿರುವೆನೆಂಬವರೆಗೆ) ಪ್ರತ್ಯಕ್ಷ ಶ್ಮಶಾನ ರೋದನದಂತೆ ಗಲಭೆಯನ್ನೆಬ್ಬಿಸಿ ಶಪಿಸಿ ಹೊರಟುಹೋದಳು. ಪಾಪ, ಆ ಮಗಳು ಆವ ಅಪರಾಧವನ್ನೂ ಕಂಡವಳಲ್ಲ, ಮನೆಗೆಲಸಗಳಲ್ಲಿ ನಿರತೆಯಾಗಿ ಗೃಹಕೃತ್ಯದ ಕಷ್ಟಸುಖಗಳನ್ನು ಹೊರಗೆಡಹದೆ, ಜನರಲ್ಲಿ ಮರ್ಯಾದೆಯಿಂದಿರಬೇಕೆಂಬ ಉದ್ದೇಶದಿಂದ ತನ್ನ ಶಾರೀರಕ ಕ್ಲೇಶಗಳನ್ನು ಕೂಡ ನೋಡದೆ, ಗಂಭೀರದಲ್ಲಿರುತ್ತಿದ್ದರೆ—ತಾಯಿ ಬಂದು ಮಾಡಿದ ಅವಾಂತರದಿಂದ ಆಕೆಗೆ ಎಷ್ಟು ಕ್ಲೇಶವೂ, 'ತಮ್ಮ ಮನೆಯಲ್ಲಾದ ಗದ್ದಲದ ವಿಚಾರವೇನೆಂದು' ನೆರೆಹೊರೆಯವರು ಕೇಳಿದಾಗ ಆಗುವ ಅಪಮಾನವೂ ಎಷ್ಟುಮಟ್ಟಿನದಾಗಿರಬೇಕು? 'ತಾಯಿಯೇ ಹೀಗೆ ಮಾಡಲು ಕಾರಣವೇನು?' ಎಂದರೆ ಉತ್ತರವೇನೂ ಕಠಿನವಲ್ಲ. ತಮ್ಮ ಅಧಿಕಪ್ರಸಂಗ, ಸ್ವಯಂಪ್ರಭುತ್ವ ಸ್ಥಾಪನೆಯ ದುರಭಿಮಾನ, ಅಸಹನೆ, ಆಗ್ರಹ ಇತ್ಯಾದಿಗಳಿಂದ ನಿಜವನ್ನು ತಿಳಿಯಲಾರದೆ ಒಂದು ಅಲ್ಪವಾದ ಮಾತಿಗೆ ಕೋಪದಿಂದ ಪರವಶಳಾಗಿ ಮಗಳಮೇಲೆ ತನ್ನ ಪ್ರಭುತ್ವವನ್ನು ತೋರಿಸಲು ಬಂದು, 'ವೃಥಾರೋಪ, ವಿನಾಕಾರಣ ಕಲಹಗಳು ಕೂಡದು, ತಾಳ್ಮೆಯಿಂದ ನಿಜವನ್ನು ತಿಳಿಯಬೇಕೆಂದು' ಹೇಳಿದ ಮಗಳನ್ನು ದ್ವೇಷಿಸಿ

ಅಷ್ಟು ಗಲಭೆಯನ್ನು ಮಾಡಿದಳೆಂದರೆ ಸಾಕು. ಹೆತ್ತ ತಾಯಿಯೇ ಹೀಗೆ ಮಕ್ಕಳ ವಿಷಯದಲ್ಲಿ ನಡೆಯುವದಾದರೆ ಇನ್ನು ನಾವು ಅಲ್ಲಿಗಲ್ಲಿಗೆ ಕಾಣು ತ್ತಿರುವ ಅತ್ತೆ ಸೊಸೆಯರ, ಅತ್ತಿಗೆ ನಾದಿನಿಯರ ವಿಚಾರಗಳೆನ್ನೆಷ್ಟಾಗಿರ ಬಹುದು? ಇವರಲ್ಲಿ ಇಬ್ಬರೂ ಸಮಾನಗುಣಿಗಳೇ ಆಗಿದ್ದರಂತೂ ಅಲ್ಲಿ ನಾಶವು—ಸಂಸಾರದ ಸುಖಸರ್ವಸ್ವದ ಹಾನಿ—ತಪ್ಪಲಾರದೆಂದರೆ ಅತ್ಯುಕ್ತಿ ಯಾದೀತೇ? ದುರಭಿಮಾನಿಯಾದ ಧೂರ್ತ ಸೊಸೆಗೆ ತನ್ನ ಮೇಲೆ ಅಧಿಕಾರ ವನ್ನು ತೋರಿಸುವ ಅತ್ತೆಯೇ ಮುಖ್ಯ ಶತ್ರುವೆಂದೂ, ಆ ಶತ್ರುವಿಗೆ ನಾದಿನಿ ಭಾವ ಮೈದುನರೆಂಬ ಬಲಗಳು ಇದ್ದಷ್ಟೂ ತನಗೆ ಚಿಂತೆ ತಪ್ಪಲಾರ ದಾದುದರಿಂದ ಮೊದಲು ಶತ್ರುವನ್ನು ಸಬಲವಾಗಿ ದೂರಸಾಗಿಸಿಬಿಟ್ಟು ತಾನು ಸುಖವಾಗಿರಬೇಕೆಂದೂ, ಅವರು ಅದನ್ನು ಸಾಧಿಸಲು ತಾವು ಇಲ್ಲದ ಸೋಗನ್ನು ಹಾಕಿಕೊಳ್ಳುವುದು, ಅತ್ತೆಯ, ನಾದಿನಿಯರ, ಭಾವ ಮೈದುನರ ಮೇಲೆ ಇದ್ದುದನ್ನೂ ಇಲ್ಲದುದನ್ನೂ ಸೇರಿಸಿ ಅವರಮೇಲೆ ನೂರಾರು ತಪ್ಪುಗಳನ್ನು ಹೊರಿಸಿ, ಗಂಡನಲ್ಲಿ ದೂರಿ, ಅನ್ನ ನಿದ್ರೆಗಳನ್ನೂ ಬಿಟ್ಟು ಅಳುತ್ತ ಕುಳಿತು, ನೆರೆಹೊರೆಯವರಲ್ಲಿ ಸಂಸಾರದ ಉಪದ್ರವವನ್ನು ಹೇಳಿ, ಸಂಸಾರದಲ್ಲಿ ವಿಷಬೀಜವನ್ನು ಬೆಳೆಸುತ್ತಿರುವುದು! ಸ್ವಾತಂತ್ರ್ಯ ಪ್ರಿಯಳಾದ ಅತ್ತೆಯೂ ಈ ಸೊಸೆಯ ವರ್ತನವನ್ನು ನೋಡಿ ಸಹಿಸಲಾರಳು! "ತನ್ನ ಮಾತಿನಂತೆ ನಡೆಯುತ್ತ ಬಿದ್ದಿರಬೇಕಾದ ಈ ತೊತ್ತು, ತನ್ನ ಅಧಿಕಾರವನ್ನು ಕಸಿದುಕೊಳ್ಳಬೇಕೆಂಬಷ್ಟು ದೂರ ಕೊಬ್ಬಿತೇ?" ಹೀಗೆ ಭಾವಿಸುತ್ತ ತನ್ನ ಅಧಿಕಾರವು ತನ್ನಲ್ಲಿರುವಾಗಲೇ ಸೊಸೆಯನ್ನು ಹಿಂಸಿ ಸುವುದೂ, ಮಗನಲ್ಲಿ ಚಾಡಿಯನ್ನು ಹೇಳುವುದೂ, ಕಂಡಕಂಡವರಲ್ಲಿ ಸೊಸೆಯಮೇಲೆ ದೂರುವುದೂ ಮೊದಲಾದ ಕೃತ್ಯಗಳಿಂದ ಸಂಸಾರದಲ್ಲಿ ಶಾಂತಿ, ಸಂತೋಷ, ಉತ್ಸಾಹ, ಮಮತೆ ಮೊದಲಾದ ಗುಣಗಳ ಹೆಸರನ್ನು ಕೂಡ ಉಳಿಸದೆ ಬಿಡುತ್ತಿರುವರು. ಇಂತಹ ಸಂಸಾರಗಳಲ್ಲಿ ದಿನವೂ ತೊಡ ಕಾಡುತ್ತಿರುವ ಪುರುಷರಿಗೆ ಇವರಿಂದ ಅದೆಷ್ಟು ಸುಖವಾಗುತ್ತಿರಬಹುದೋ ಹೇಳಬಹುದೇ? ಈ ಪ್ರಸ್ತಾಪಗಳು ಇಷ್ಟಕ್ಕೇ ಸಾಕಾಗಿರಲಿ.

ಸೋದರಿಯರೇ! ಕ್ಷಮೆಯಿರಲಿ. ಪ್ರಸಂಗಕ್ಕೆ ಉದಾಹರಣೆಯನ್ನು ಮಾತ್ರ ಕೊಟ್ಟೆವು ಅಷ್ಟೆ. ಸೋದರಿಯರಮೇಲೆ ಅಸೂಯೆಯಿಂದಿದನ್ನು

ಬರೆಯಲಿಲ್ಲ. ನಾವೆಲ್ಲರೂ ಅಲ್ಲಿಗಲ್ಲಿಗೆ ನೋಡುತ್ತಿರುವ, ಕೇಳುತ್ತಿರುವ, ವಿಚಾರಗಳ ಉದಾಹರಣೆಗಳಿಂದಲೇ ನಮ್ಮ ನಮ್ಮಲ್ಲಿರುವ ದೌರ್ಜನ್ಯಾಂಶ ಗಳನ್ನು ಆರಿಸಿ ತೆಗೆದು ಹೊರಗೆ ಹಾಕಿ, ನಮ್ಮಲ್ಲಿ ಸೌಜನ್ಯಕ್ಕೆ ಅನುವುಂಟು ಮಾಡಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಮಾತ್ರ ಇದನ್ನು ಬರೆದಿರುವುದು. ಇದಕ್ಕಾಗಿ ಕ್ಷಮೆಯಿರಲಿ!

ಒಂದು ಮನೆಯಲ್ಲಿ ಇಬ್ಬರಿದ್ದರೆ ಕೂಡ, ಅವರಲ್ಲಿ ಪರಸ್ಪರ ಮಿತ್ರತ್ವವಿಲ್ಲದಿದ್ದರೆ ಆ ಮನೆಗೆ ಕ್ಷೋಭೆ ತಪ್ಪದು. ಅಂತಹದರಲ್ಲಿ ಒಂದೇ ಮನೆಯಲ್ಲಿ ಪರಸ್ಪರ ವಿರುದ್ಧ ಭಾವದ ಶತ್ರು ಮಿತ್ರರು ಅನೇಕರಿದ್ದರೆ ಆ ಗೃಹ ರಾಜ್ಯದ ಗತಿಯೇನಾಗಬೇಕು?

ಇಲ್ಲಿ ಮಿತ್ರರೆಂದರೆ, 'ತಾವಾರು, ಎಲ್ಲಿಯವರು, ಏತಕ್ಕಾಗಿ ಹುಟ್ಟಿರುವವರು, ತನಗೂ ಪರಮಾತ್ಮನಿಗೂ ಇರುವ ಸಂಬಂಧವೆಂತಹದು, ಪರಮಾತ್ಮನಿಗೂ ಇತರ ಮಾನವರಿಗೂ ಇರತಕ್ಕ ಸಂಬಂಧವೆಂತಹದು, ಮತ್ತು ಪರಮಾತ್ಮನಿಗೂ ಇತರ ಪ್ರಾಣಿಗಳಿಗೂ ಇರುವ ಸಂಬಂಧವಾವುದು--ಇವೆಲ್ಲವನ್ನೂ ತಿಳಿದುಕೊಳ್ಳುವ ಸದಸದ್ವಿವೇಕವುಳ್ಳವರಾಗಿ ಪ್ರಾಪಂಚಿಕ ಮತ್ತು ಪಾರಮಾರ್ಥಿಕ ತತ್ವಗಳನ್ನು ತಿಳಿದು ಭೂತದಯಾ ಔದಾರ್ಯಾದಿ ಗುಣಗಳಿಂದ ಕೂಡಿರುವವರೇ ಮಿತ್ರರು. ಇವರಲ್ಲಿಯೇ ನಿಜವಾದ ಮೈತ್ರಿಯು—ಎಂದರೆ, ಇತರರಿಗೆ ಶ್ರೇಯಸ್ಸುಂಟಾಗಲೆಂಬ ಸದಿಚ್ಛೆಯು ಇರುವುದು. ಶತ್ರುಗಳೆಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಾದಿ ಅಂತಃಶತ್ರುಗಳ ಆವೇಶದಿಂದ ಉಚಿತಾನುಚಿತ, ಸಾರಾಸಾರ, ಪೇಯಾಪೇಯ, ಭಕ್ಷ್ಯಾಭಕ್ಷ್ಯ, ಪಾತ್ರಾಪಾತ್ರ ತಾರತಮ್ಯ ಜ್ಞಾನವಿಲ್ಲದೆ ಎಲ್ಲವನ್ನೂ ತಮ್ಮ ಸದ್ಭಾವನಾ ಶೂನ್ಯ ದೃಷ್ಟಿಯಿಂದಲೇ ನೋಡುತ್ತ ಸ್ವಜನರೆನ್ನದೆ ಅನ್ಯರೆನ್ನದೆ ಅವರ ನಾಶವನ್ನೇ ಚಿಂತಿಸುತ್ತ ತಮ್ಮ ಉದ್ದೇಶ ಸಿದ್ಧಿಯಾಗುವವರೆಗೂ ಹೊಟ್ಟೆಯೊಳಗೆ ಕೆಡುಕನ್ನೇ ಬಗೆಯುತ್ತಲೂ ಹೊರಗೆ (ಮೇಲೆ) ಒಳಿತನ್ನೇ ಮಾಡುವವರಂತೆ ನಟಿಸುತ್ತಲೂ, ಗೃಹಚ್ಛಿದ್ರಗಳನ್ನೇ ಹುಡುಕುತ್ತಿದ್ದು ಸಿಕ್ಕಿದಾಗ ಕಲಹ ಕಾರಣಗಳನ್ನು ಹಬ್ಬಿಸುತ್ತಲೂ ಇರುವ ಮೂರ್ಖರೇ ಶತ್ರುಗಳಾಗಿರುವವರು.

ಮೇಲೆ ಹೇಳಿರುವ ಪ್ರವೃತ್ತಿಯಿಂದ ರಹಿತರಾಗಿರುವದೇ ನಮ್ಮ ಸ್ತ್ರೀ ಸಮುದಾಯದ ಮೇಲೆ ಸದ್ಯಸ್ಥಿತಿಯಲ್ಲಿ ಕವಿದಿರುವ ದೌರ್ಜನ್ಯಕ್ಕೆ ಹೇತುವಾಗಿದೆ. ಈ ಸದ್ಭಾವನಾ ಶೂನ್ಯ ಹೃದಯದಲ್ಲಿ ತಾವಾಗಿ ಹುಟ್ಟುವ ದುರಾಗ್ರಹಾದಿಗಳೇ ಈ ನಮ್ಮವರ 'ಅಬಲಾ' ಎಂಬ ಶಬ್ದವನ್ನು 'ಅತಿಬಲಾ' ಎಂದು ಹೇಳಿಕೊಳ್ಳಲು ಆಸ್ಪದಗಳಾಗಿವೆ.

ಒಟ್ಟಿನಲ್ಲಿ ಹೇಳುವುದೇನೆಂದರೆ, ವಿನಯ, ವಿವೇಚನೆ, ವಿತರಣಾದಿ ಸೌಶೀಲ್ಯಗಳನ್ನು ಅಭಿವೃದ್ಧಿಪಡಿಸುವ ಸುಶಿಕ್ಷಣಾರೂಪವಾಗಿ ಲಭಿಸುವ ಜ್ಞಾನವೇ ವಿದ್ಯೆ. ಈ ವಿದ್ಯೆಯಿಂದಲೇ ಮಾನಸಿಕ ಉನ್ನತಿ (ಅಂತಃಕರಣವು ಸದ್ಗುಣ, ಸದ್ಭಾವನೆಗಳಿಂದ ಪ್ರಕಾಶ ಹೊಂದುವುದು.) ಶಾರೀರಿಕ ಉನ್ನತಿ (ಸದ್ವಿಷಯ ಚಿಂತನೆ, ಸತ್ ಅಭ್ಯಾಸ, ಸದಾಹಾರಗಳಿಂದಲೂ ಮಾನಸಿಕ ಶಕ್ತಿಯಿಂದಲೂ ದೇಹವು ಇತರ ಉಪಾಧಿಗಳಿಗೀಡಾಗದೆ ದೃಢವಾಗಿರುವುದು) ಗಳನ್ನು ಹೊಂದಿ, ಆವ ಮಹತ್ಕಾರ್ಯವನ್ನು ನಿರ್ವಹಿಸುವುದಕ್ಕೂ ಅರ್ಹತೆಯನ್ನು ಹೊಂದಬಹುದಾಗಿದೆ. ಅದಲ್ಲದೆ ಶಿಕ್ಷಾರಹಿತವಾದ ವಾಗಾಡಂಬರಾದಿ ಮೇಲಿನ ನಡತೆಗಳೆಲ್ಲವೂ ಅವಿದ್ಯೆಯೆನ್ನಿಸುವುದು. ಈ ಅವಿದ್ಯೆಯಿಂದಾಗುವ ಪರಿಣಾಮವೇ ಈವರೆಗೆ ವಿವರಿಸಲ್ಪಟ್ಟ ವಿಚಾರಗಳು.

---

## IV

## ಸ್ವಕೀಯರ ಮೇಲುಂಟಾದ ಈರ್ಷ್ಯಾಸೂಯೆಗಳಿಂದಾಗುವ ಪರಿಣಾಮ.

ಹಿಂದೆ ಹೇಳಿದಂತೆ ಸ್ವಜನರಲ್ಲಿ ಉಂಟಾದ ಈರ್ಷ್ಯಾಸೂಯೆಗಳಿಂದ ಅವರ ಪ್ರತಿಯೊಂದು ಕಾರ್ಯಕಲಾಪಗಳಲ್ಲಿಯೂ, ಮೇಲ್ಕಂಡ ಸ್ವಪ್ರತಿಷ್ಠಾಪರರಾದ ಅವಿದ್ಯಾವತಿಯರಿಗೆ ದೋಷವೇ ಕಂಡುಬರುವುದು. ಈ ಬಗೆಯ ದೋಷದೃಷ್ಟಿಯ ಬಲದಿಂದಲೂ, ಈರ್ಷ್ಯಾಕಲುಷಿತ ಮನಸ್ಸಿನ ದುರ್ಬಲತೆಯಿಂದಲೂ, ಅವರನ್ನು (ತಮ್ಮ ಆಗ್ರಹಕ್ಕೆ ಕಾರಣರಾದ ಸ್ವಜನರನ್ನು) ದೂಷಿಸಬೇಕೆಂಬ ಆಶೆ ಇವರಲ್ಲಿ ಅಂಕುರವಾಗುವುದು. ಸಾಮಾನ್ಯವಾಗಿ ನಮ್ಮ ಸ್ತ್ರೀ ಜಾತಿಗೆ ಆವುದೇ ಒಂದು ವಿಷಯದಲ್ಲಿಯಾಗಲಿ, ಆಶೆ

ಯುಂಟಾಯಿತೆಂದರೆ ಅದನ್ನು ಮಾಡದಿದ್ದರೆ ಅವರ ಮನಸ್ಸಿಗೆ ತುಂಬ ಕಷ್ಟ ವಾಗುವುದು, ಹೇಗಾದರೂ ಅವರು ಆ ಆಶೆಯನ್ನು ಈಡೇರಿಸಿಕೊಳ್ಳಲು ಪ್ರಯತ್ನಪಟ್ಟೇಪಡುವರಲ್ಲದೆ ಬಿಡುವವರಲ್ಲ. ಆದುದರಿಂದ ಮೇಲೆ ಹೇಳಿದಂತೆ ಇವರ ಆಶೆಯು ಪೂರ್ಣವಾಗಬೇಕಾದರೆ ಆಗ ಇವರು ಇತರ ರಾರನ್ನಾದರೂ ಹುಡುಕಲೇ ಬೇಕು. ಅವರಲ್ಲಿ ಬಳಕೆಯನ್ನು ಹೊಂದಿ, ಮೆಲ್ಲಮೆಲ್ಲನೆ ತಮ್ಮ ಮನಸ್ಸಿನಲ್ಲಿರುವ ವಿಷಯವನ್ನು ಉಸಿರಲೇ ಬೇಕು. ಇಂತಹರಿಗೆ "ತಮ್ಮವರನ್ನೇ ತಾವು ಇತರರಲ್ಲಿ ದೂಷಿಸಿದರೆ ತಮ್ಮ ಮಾನ ವನ್ನು ತಾವೇ ಬೈಲಿಗೆ ತಂದುಕೊಂಡಂತಾಗುವುದಲ್ಲದೆ, ಅವರಿಗೆ ಅದರಿಂದ ತಮ್ಮ ಮನಸ್ಸಿನ ಸಮಾಧಾನಕ್ಕೆ ತಾವೇ ಪ್ರತಿಕೂಲರಾಗುವೆವೆಂಬ" ವಿಚಾರವು ಮೊದಲು ತಿಳಿವುದಿಲ್ಲ. ಪರಿಣಾಮದಲ್ಲಿ ತಮ್ಮಿಂದಾದ ತಪ್ಪಿಗಾಗಿ ತಾವು ತಮ್ಮಲ್ಲಿಯೇ ಕೊರಗಿ ಕೊರಗಿ ಸಾಯಬೇಕಾಗುವುದು! ಅವರಲ್ಲಿ ಕೆಲವರಿಗೆ ಕಡೆಯವರೆಗೂ ತಿಳಿವಳಿಕೆಯುಂಟಾಗುವುದಿಲ್ಲ; ಅಂತಹ ಅಂಧ ಹೃದಯರಿಗೆ ತಮ್ಮ ದೌರ್ಜನ್ಯವು ತಿಳಿಯದೆ ತಮ್ಮ ದೌರ್ಜನ್ಯದ ಫಲಾನು ಭವವಾಗಿ ತಾವು ಅತ್ಯಂತ ಹೀನಸ್ಥಿತಿಗೆ ಬಂದು ತಪಿಸುತ್ತಿದ್ದರೂ ತಾವು ಬಹು ಸಜ್ಜನೆಯರೆಂದೂ ತಮ್ಮ ಮೇಲೆ ಅಸೂಯೆಯಿಂದಲೂ ಕೃತಘ್ನತೆ ಯಿಂದಲೂ ತಮ್ಮವರೇ ತಮ್ಮನ್ನು ಈ ಗತಿಗೆ ತಂದರೆಂದೂ ಪ್ರಲಪಿಸುತ್ತ ಕೇಳುವವರಿಗೂ ನೋಡುವವರಿಗೂ ಅಸಹ್ಯತೆಯನ್ನುಂಟುಮಾಡುತ್ತಿರು ವವರು ಈಗಲೂ ಅಲ್ಲಲ್ಲಿ ಕಾಣುತ್ತಿರುವರು. ಇವರು ಹೀಗೆ ತಮ್ಮವರ ತಪ್ಪನ್ನು ಹೆರವರಲ್ಲಿ ಹೇಳಿ ಮನೆಯ ಛಿದ್ರವನ್ನು ಹೊರಗೆಡಹುವುದರಿಂದಾ ಗುವ ಫಲವೇನೆಂಬುದೇ ಸಮಗಿಲ್ಲಿ ಮುಖ್ಯ ವಿಚಾರವು.

ಸ್ವಜನರಲ್ಲಿ ಕೋಪಗೊಂಡು ಅವರ ವಿಷಯದಲ್ಲಿ ಮತ್ಸರಗ್ರಸ್ತರಾಗಿ ಅವರ ತಪ್ಪನ್ನೇ ಆರಿಸುತ್ತಿರುವವರಿಗೆ ಅವರನ್ನು ಹಿಂದೆಮುಂದೆ ಆಡಿಕೊಳ್ಳ ದಿರಲಾಗುವುದಿಲ್ಲ. ಆಡಿಕೊಳ್ಳಬೇಕಾದರೆ ಮೊದಮೊದಲು ತಮ್ಮ ತಮ್ಮ ಲ್ಲಿಯೇ ಗೊಣಗುತ್ತಿರುವುದು, ಶಪಿಸುವುದು ಇವು ನಡೆವುವು. ಅಷ್ಟ ರಿಂದಲೇ ಆ ವಿಕಾರವಾದ ಮನಸ್ಸು ತೃಪ್ತಿಹೊಂದುವುದಿಲ್ಲ. ಆರ ಇದಿರಿ ಗಾದರೂ ಆಡಿ ಅವರಿಂದಲೂ ಆಡಿಸಲೇ ಬೇಕು; ಮತ್ತು ತಮ್ಮವರ ತಪ್ಪನ್ನು ತಾವು ಉದ್ಘಾಟಿಸುವುದನ್ನೂ ಅವರು ಮತ್ತಿಷ್ಟು ಪುಷ್ಟಿಗೊಳಿಸ

ಬೇಕು. ಆದರಿಂದ ತಮ್ಮ ಮನಸ್ಸಮಾಧಾನವಾಗಬೇಕು. ಅವರಲ್ಲಿ ಸ್ವಾತಂತ್ರ್ಯಪ್ರಿಯರಾದವರಿದ್ದರೆ ಪ್ರತ್ಯಕ್ಷವಾಗಿ ನಿಷ್ಠುರವನ್ನು ಹೇಳುವು ದಲ್ಲದೆ ಮೇಲೆ ಹೇಳಿದಂತೆಯೂ ಮಾಡುವರು. ಹೀಗೆ ಮಾಡಲಾಗದಿದ್ದ ದಿನವೇ ಅವರಿಗೆ ದುರ್ದಿನವೆನಿಸುವುದು. ಅವರಿಗೆ ಅಂದು ಉಂಡ ಅನ್ನವು ಜೀರ್ಣವಾಗುವುದಿಲ್ಲವೆಂದರೂ ಒಪ್ಪುವುದು. ಆದುದರಿಂದಲೇ ಅವರು ತಮ್ಮ ಮನಸ್ಸಿನಲ್ಲಿರುವುದನ್ನು ಆಡಿ ತೋರಿಸಲು ತನಗೆ ತಮ್ಮ ಮನೆ ಯವರಲ್ಲದ ಇತರರು ಆರನ್ನಾದರೂ ಅವರು ಹುಡುಕಲೇ ಬೇಕು. ಹಾಗೆ ಅರಸುವ (ಹುಡುಕುವ) ಇವರ ಕಣ್ಣಿಗೆ ಬೀಳುವವರು, ತಮಗೆ ಚಿಕ್ಕವ ರಾಗಿರಲಿ, ದೊಡ್ಡವರಾಗಿರಲಿ, ಕಡೆಗೆ ಮಕ್ಕಳಾದರೂ ಸರಿ—ಅವರಲ್ಲಿ ಹೇಳಿ ತಮ್ಮ ಉಬ್ಬಸ ರೋಗವನ್ನು ಕಳೆದುಕೊಳ್ಳಬೇಕು. ಆ ಸಂದರ್ಭದಲ್ಲಿ ತಮ್ಮ ದೂರನ್ನು ಕೇಳುವವರೊಬ್ಬರಾದರೂ ದೊರೆತರೆ ಸಾಕೆಂದು ಆತುರ ಪಡುತ್ತಿರುವ ಇವರ ಮನಸ್ಸಿಗೆ ವ್ಯಕ್ತಿ ತಾರತಮ್ಯ ಜ್ಞಾನವಾಗಲಿ, ಮತ ಭೇದವಾಗಲಿ, ಪಾತ್ರಗಳ ನೀಚೋಚ್ಚತನಗಳಾಗಲಿ, ಗೋಚರಿಸುವಂತಿಲ್ಲ. ಹೇಳಿಕೇಳಿದುದೊಂದೇ ಗೊತ್ತು. ಹೀಗೆ ಮಾಡುವುದಕ್ಕಾಗಿ ಮೇಲೆ ಹೇಳಿದಂತೆ ಹೆರವರಲ್ಲಿ ಹೆಚ್ಚು ಹೆಚ್ಚಾಗಿ ಬಳಕೆಯನ್ನು ಮಾಡಿಕೊಳ್ಳ ಬೇಕು.

ಹೀಗೆ ಸಂಪಾದಿಸಿದ ಸ್ನೇಹಿತರ ಸ್ವಭಾವವೆಲ್ಲವೂ ಒಂದೇ ಬಗೆಯದಾ ಗಿರುವುದಿಲ್ಲ. ಕೆಲವರಿಗೆ ನೆರೆಹೊರೆಯವರಲ್ಲಿಯೂ ಸ್ಥಳೀಯರಲ್ಲಿಯೂ ನಿಜವಾದ ಅಭಿಮಾನವಿದ್ದು ಎಲ್ಲರ ಹಿತಚಿಂತನೆಯೂ ಅವರಿಗೆ ಸಹಜಗುಣ ವಾಗಿರಬಹುದು. ವಿವೇಕವುಳ್ಳವರು ಈ ದೂಷಕರ ದೂಷಣೆಗಳನ್ನು ಅಷ್ಟಕ್ಕೇ ಮುರಿದು ಅವರವರಲ್ಲಿ ಸಾಮರಸ್ಯವುಂಟಾಗಿ ಶಾಂತಿಯು ನೆಲೆ ಗೊಳ್ಳುವಂತೆ ಮಾಡುವರೂ ಇರಬಹುದು. ಇಂತಹರಲ್ಲಿ ದೂರು ಹೇಳಿ ದರೆ ಅದರಿಂದ ಈ ದೂರಿಗೆ ಪಾತ್ರರಾದವರಿಗಾಗಲಿ, ಅವರ ಮನೆತನ ಕ್ಕಾಗಲಿ ಯಾವ ಹಾನಿಯೂ ತಟ್ಟುವುದಿಲ್ಲ. ದೂರು ಹೇಳಿದವರ ಮಾನಕ್ಕೇ ಕೊರತೆಯಾಗಬಹುದು. ಮತ್ತೆ ಕೆಲವರು, ಯಾರು ಏನು ಹೇಳಿದರೂ "ಮೌನೇನ ಕಲಹಂ ನಾಸ್ತಿ" ಎಂಬ ಸೂತ್ರವನ್ನೇ ಹಿಡಿದು– "ಎಡದ ಕಿವಿಯಿಂದ ಕೇಳಿ ಬಲದ ಕಿವಿಯಿಂದ ದೂಡುವುದು" ಎಂಬಂತೆ

ಅದನ್ನು ಅಲ್ಲಿಯೇ ಆಗಲೇ ಮರೆತು, ತಮ್ಮಷ್ಟಕ್ಕೆ ತಾವು ನೆಮ್ಮದಿಯ ಲ್ಲಿರುವರು. ಇಂತಹರಿಂದಲೂ ಮೇಲೆ ಹೇಳಿದವರಿಗೆ ಆವ ಹಾನಿಯೂ ಆಗುವುದಿಲ್ಲ; ದೂರುವರಿಗೂ ಇವರಿಂದ ಪ್ರೋತ್ಸಾಹವಾಗಲಿ, ಉತ್ಸಾಹ ಭಂಗವಾಗಲಿ ಎರಡೂ ಆಗುವುದಿಲ್ಲ. ಆದರೆ ಅಷ್ಟಕ್ಕೇ ಮತ್ಸರವು ಸುಮ್ಮ ನಿರಬೇಕೆಲ್ಲವೇ? ನೆರೆಹೊರೆಯವರ ಹುಳುಕನ್ನೇ ಹುಡುಕುತ್ತ ಕಲಹ ವನ್ನೆಬ್ಬಿಸುವುದರಲ್ಲಿಯೂ, ಹತ್ತಿದ ಕಲಹಗಳನ್ನು ನೋಡಿ ನಲಿಯುವುದ ರಲ್ಲಿಯೂ ಆಶೆಯುಳ್ಳವರಿದ್ದರೆ ಸಾಕು, ಅವರು ಅಂತಹ ಸುಸಂಧಿಯನ್ನು ಹೇಗೂ ಕಳೆದುಕೊಳ್ಳುವವರಾಗಿಲ್ಲ; ತಮ್ಮ ಕಡೆಗೆ ದೂರು ತಂದವರನ್ನು ಉಪಚಾರೋಕ್ತಿಗಳಿಂದ ಚನ್ನಾಗಿ ಉಬ್ಬಿಸಿ, ತಮ್ಮ ಕಡೆಗೆ ಒಲಿಸಿಕೊಂಡು, ಮೊದಲೇ ಮತ್ಸರ, ಕ್ರೋಧಗಳಿಂದ ಏಕಾರವಶವಾಗಿರುವ ಅವರ ಮನ ಸ್ಸನ್ನು ಮತ್ತಷ್ಟು ದ್ವೇಷ—ಹಟ—ನಿರಂಕುಶ ಪ್ರವರ್ತನಗಳ ಗಾಳಿಯಿಂದ ಹೊಲಸಾಗುವಂತೆ ಉಪದೇಶಿಸಿ, ಅವರು ಅದರಿಂದ ಮೈಮರೆತು ಸ್ವಜನರಿಗೆ ದಿನದಿನಕ್ಕೂ ಹೆಚ್ಚುಹೆಚ್ಚಾದ ತೊಂದರೆಗಳನ್ನು ಕೊಡುವಂತೆ ಮಾಡಿಬಿಡು ವರು. ಹೀಗೆ ಹತ್ತಿದ ಕಲಹವು ಮೊದಲು ಇವರ ಆಗ್ರಹಕ್ಕೆ ಕಾರಣರಾದ ವರಿಗೆ ಮಾತ್ರ ಕಷ್ಟಕ್ಲೇಶಗಳನ್ನುಂಟುಮಾಡುವುದು; ಬರಬರುತ್ತ ಅದೇ ವಿಷದಂತೆ ಆ ಮನೆಗೆಲ್ಲ ವ್ಯಾಪಿಸಿ, ಮನೆಯಲ್ಲಿ ಒಬ್ಬರನ್ನೂ ಬಿಡದೆ ಎಲ್ಲ ರನ್ನೂ ತನ್ನ ಜ್ವಾಲೆಯಿಂದ ಕಂದಿಕುಂದುವಂತೆ ಮಾಡುವುದು. ಹೆಚ್ಚೇಕೆ, ಇಂತಹ ಗೃಹಕಲಹಗಳಿಗೆ ಕಾರಣರಾದ ಒಬ್ಬೊಬ್ಬರಿಂದಲೇ ಎಷ್ಟೋ ಮನೆ ತನಗಳು ನಾಶಹೊಂದಿರುವುದನ್ನು ಇತಿಹಾಸಗಳಿಂದಲೂ ದೃಷ್ಟಾಂತ ಗಳಿಂದಲೂ ಮನಗಾಣಬಹುದು. ಆದರೆ ಈ ಮೇಲೆ ಹೇಳಿದ ಕಲಹಕ್ಕೆ, ಸ್ವಜನರ ಮೇಲಿನ ಮತ್ಸರಕ್ಕಾಗಿ ಅನ್ಯರ ಸ್ನೇಹವನ್ನು ಸಂಪಾದಿಸಿ, ಅವ ರಿಂದ ಸ್ವಜನರ ಮಾನಖಂಡನವನ್ನು ಮಾಡಿಸಬೇಕೆಂಬ ದುರಭಿಮಾನವು, ಕೇವಲ ಅಕ್ಷರ ಶತ್ರುಗಳಾದ ಮಹಿಳೆಯರಿಂದಲೇ ಆಗುವದೆಂದು ಮಾತ್ರ ಹೇಳಬಾರದು. ಈಗಿನ ವ್ಯವಹಾರೋದ್ಯೋಗ ಪರಿಶ್ರಾಮಕ ಕಲೆಗಳಲ್ಲಿ ಪರಿಣತೆಯರಾಗಿ ತಾವು ವಿಶೇಷ ಸುಧಾರಿಸಿದವರೆಂದೂ ಪೂರ್ಣ ವಿದ್ಯಾ ವತಿಯರೆಂದೂ ಹೆಮ್ಮೆಗೊಂಡಿರುವವರಿಂದಲೂ ಮೇಲೆ ಹೇಳಿರುವ ಅನರ್ಥ ವಲ್ಲದೆ—ಅಕ್ಷರ ಶತ್ರುಗಳೆನ್ನಿಸುವಂತಹ ಮೂಢ ಸ್ತ್ರೀಯರಿಗೂ ಇಮ್ಮಡಿ

ಮುಮ್ಮಡಿಯಾದಷ್ಟು ಹಾನಿಯುಂಟಾಗಿ ಆಗುತ್ತಿರುವುದೆಂಪೂ ಹೇಳ ಬಹುದು. ಹೇಗೆಂದರೆ, ಮೇಲೆ ಹೇಳಿದ ಸ್ತ್ರೀಯರು ತಮ್ಮ ಸ್ವಜನರನ್ನು ಮಾತ್ರವೇ ಕ್ವಚಿತ್ತಾಗಿ ತಮ್ಮ ಅನುಯಾಯಿಗಳನ್ನೂ ಕೂಡ ಸಂಕಟ ಪಡಿಸುವವರಾಗುವರು ; ಇವರು (ಕಲಾಭಿಜ್ಞತೆಯಿಂದ ಮುಕ್ತರಾದವರು) ತಮ್ಮ ಸ್ವಜನರನ್ನು ಮಾತ್ರವೇ ಅಲ್ಲ, ಅವರ ತಲೆತಲಾಂತರದವರನ್ನೂ ತಮ್ಮ ಸಮಾಜ ಪದ್ಧತಿ, ಶಾಸನ ಧರ್ಮಗಳನ್ನೂ, ಧರ್ಮಪಂಥದವರನ್ನೂ ಕೂಡ ಕ್ಲೇಶಕ್ಕೆ ಹಚ್ಚುವುದರಲ್ಲಿ ತಮಗಿರುವ ನಿಸ್ಸೀಮ ಪಾಂಡಿತ್ಯವನ್ನು ಪ್ರದರ್ಶಿಸುವರು. ಅಂತಹರಿಗೆ ಹಿಂದಿನವರೆಲ್ಲರೂ ಮೂಢರು, ಮೂರ್ಖರು, ಜಡರು, ಅಲಸರು, ಅಂಧರು—ಎಂಬ ಭಾವನೆಯುಂಟಾಗುವುದರಿಂದ, ತಾವೇ ಕುಶಲರೆಂದೂ, ಚಟುವಟಿಕೆಯುಳ್ಳವರೆಂದೂ, ಸಾಹಸ—ಜಾಗ್ರತೆಗಳುಳ್ಳವ ರೆಂದೂ, ಸಂಪೂರ್ಣ ಪಾಂಡಿತ್ಯವುಳ್ಳವರೆಂದೂ, ತಮ್ಮ ಈ ಪಾಂಡಿತ್ಯಕ್ಕೆ ತಾವು ಅವಲಂಬಿಸಿರುವ ವಿದೇಶೀಯಾಚಾರ—ವಿಚಾರಗಳ ಅನುಕರಣ ಮತ್ತು ಅವರ ಸ್ನೇಹ—ವ್ಯವಹಾರವೇ ಕಾರಣವೆಂದೂ ನಂಬುವರು. ಈ ನಂಬುಗೆ ಯಿಂದಲೇ ಅವರು ತಮ್ಮ ಸಮಾಜದ ಕಟ್ಟಳೆಗಳನ್ನು ಮೀರಿ ನಡೆವುದಕ್ಕೂ ತಮ್ಮ ಸ್ವಜನರೆನ್ನಿಸುವವರನ್ನು ಬೇಕಾದಂತೆ ಅಲ್ಲಗಳೆದು, ಅವರ ಆಚಾರ—ವಿಚಾರ, ಧರ್ಮಶ್ರದ್ಧೆಗಳನ್ನು ಘಾತಕಕ್ರಿಯೆಗಳೆಂದು ಜರಿದಾಡುವುದಕ್ಕೂ, ತಮ್ಮಂತೆ ಸುಧಾರಿಸಿದ ಪದ್ಧತಿಗಳನ್ನು ಅನುಕರಿಸಿ ನಾಗರಿಕರಾಗು ವುದಕ್ಕೂ ಅವರು ಸ್ವತಂತ್ರರಾಗುವರು. ಹೀಗೆ ಮಾಡುವುದರಿಂದ ಅವರು ಹೊಂದುವ ಲಾಭದ ಮಾತು ಹಾಗಿರಲಿ, ಬಾಧಕವೆಷ್ಟೆಂದು ಇಲ್ಲಿ ವಿವರಿಸು ವಂತಿಲ್ಲ. ಒಂದುಕಡೆ ಮೇಲಿನ ಅಕ್ಷರ ಶತ್ರುಗಳಿಂದ ಆಂತರಿಕ ಕ್ಲೇಶ ವುಂಟಾದರೆ ಇವರಿಂದ ಅಂತರ್ಬಹಿಗಳಲ್ಲಿಯೂ ಕ್ಲೇಶಕಷ್ಟಗಳುಂಟಾಗು ವಂತಿರುವುವು. ಹೀಗೆ ಎರಡು ವಿಧವಾದ ತಾಪಗಳೂ ಸೇರಿದರೆ ಅವರಿಂದ ಎಷ್ಟು ಸುಖ, ಶಾಂತಿ, ಸಂಪದಭಿವೃದ್ಧಿಗಳಾಗುವವೆಂಬುದು ಭಾವನೆಗೂ ಮೀರಿದುದು ! ಎಂದರೆ ಇಲ್ಲಿ ನಾವು ಕೌಶಲ್ಯದ ಕಲೆಗಳನ್ನೂ ವಿದ್ಯಾಭ್ಯಾಸ ವನ್ನೂ ನಿಷೇಧಿಸುವೆವೆಂದಾಗಲಿ, ಅನ್ಯರಲ್ಲಿ ಸ್ನೇಹವನ್ನು ಸಂಪಾದಿಸಲಾಗ ದೆಂದು ಹೇಳಿದೆವೆಂದಾಗಲಿ ಭಾವಿಸಬಾರದು. ನಮ್ಮ ಉದ್ದೇಶವು ಹಾಗಿಲ್ಲ. ಒಂದೇ ಮನೆಯಲ್ಲಿ ಒಬ್ಬ ಕರ್ತೃವಿನ ವಿಚಾರಣೆಯಲ್ಲಿ ಅನ್ಯೋನ್ಯ

ದಿಂದ ಯಾವಜ್ಜೀವವೂ ಇರಬೇಕಾದ ತಮ್ಮಲ್ಲಿ ತಾವೇ ಒಬ್ಬರಿಗೊಬ್ಬರು ಮತ್ಸರಿಸಿ ಅವರ ದೋಷಗಳನ್ನು ಅನ್ಯರಲ್ಲಿ ಹೇಳುವುದು ಹಾನಿಕರವೆಂದೂ, ಅದರಿಂದ ಇಂದು ತಮಗೆ ಆಪ್ತರೆಂದು ತೋರುವ ಹೆರವರೇ ಮುಂದೆ ತಮಗೆ ಮಾನಹಾನಿಮಾಡುವವರಾದಾರೆಂದೂ ತಿಳಿದು ಮತ್ಸರವನ್ನು ಮೊಳಕೆಯಲ್ಲಿಯೇ ಕಿತ್ತುಹಾಕಬೇಕೆಂದೂ, ಅದರಿಂದಲೇ ಮನಸ್ಸಮಾಧಾನ ವಾಗುವುದೆಂದೂ ಪ್ರಥಮತಃ ಹೇಳಲ್ಪಟ್ಟ ಸೋದರಿಯರಿಗೆ ನಿವೇದಿಸು ವುದು; ಮತ್ತು ತಾವು ಒಂದೆರಡು ಕಲೆಗಳನ್ನು ಕಲಿತ ಮಾತ್ರದಿಂದಲೇ ತಮ್ಮ ಶಾರೀರಕ–ಮಾನಸಿಕ ಧರ್ಮಗಳನ್ನು, ಜನ್ಮಸ್ಥಾನ–ಪೋಷಣ ಕ್ರಮ, ದೇಶಧರ್ಮ, ಅನುಷ್ಠಾನಗಳನ್ನು ವಿಚಾರಪೂರ್ವಕವಾಗಿ ನೋಡ ಲೊಲ್ಲದೆ, ಅಭಿಮಾನಾಂಧತೆಯಿಂದ ಅವನ್ನು ಮೂಲೆಗೊತ್ತರಿಸುವುದ ರಿಂದಲೂ ತಮ್ಮಂತೆಯೇ ನಡೆಯಲು ತಮಗೆ ಸೇರಿದವರನ್ನೂ ಸೇರದಿರುವವ ರನ್ನೂ ನಿರ್ಬಂಧಿಸುವುದರಿಂದಲೂ ನಿಜವಾದ ಲೋಕಹಿತವು ಸಾಧನೆ ಯಾಗದೆ ಹೋಗುವುದೆಂಬುದನ್ನು ಖಚಿತವಾಗಿ ತಿಳಿದು, ಸ್ವಪ್ರತಿಷ್ಠಾ ಕಾಮನೆಯ ಮತ್ತತೆಯನ್ನು ಬಿಟ್ಟು ಸಹಜ ಸೌಜನ್ಯದಿಂದ, ಲೋಕಹಿತ ವನ್ನು ಸಾಧಿಸುವುದರಲ್ಲಿ ಸಂಕಲ್ಪಿಸಿ, ತಮ್ಮಲ್ಲಿ ಮೊದಲಿಂದಲೂ ಬಂದಿರುವ ಪದ್ಧತಿಗಳನ್ನು ಈ ಕಾಲಕ್ಕೆ ಬಾಧಕವಿಲ್ಲದಂತಿಷ್ಟು ಸುಧಾರಿಸಿಕೊಂಡು ಆಚರಿಸಬೇಕಾದುದೇ ಶ್ರೇಯಸ್ಕರವೆಂದೂ ಆ ನಮ್ಮ ಕಲಾಭಿಜ್ಞ ಸೋದರಿ ಯರಲ್ಲಿ ನಿವೇದಿಸುವುದು. ಇಂತಿಷ್ಟೇ ನಮ್ಮ ಉದ್ದೇಶವು.

ಏಕೆಂದರೆ, ಯಾರೇ ಆಗಲಿ, ಸೃಷ್ಟಿನಿಯಮವನ್ನು ಮೀರಲಾಗುವು ದಿಲ್ಲ; ಪ್ರಕೃತಿಯು ಧರ್ಮವನ್ನು ಪುರುಷನೂ, ಪುರುಷ ಧರ್ಮವನ್ನು ಪ್ರಕೃತಿಯೂ ಹಿಡಿದರೆ ಸೃಷ್ಟಿನಿಯಮವನ್ನು ಅನುಸರಿಸಿದಂತೆ ಆಗುವುದಿಲ್ಲ. ಪ್ರಕೃತಿಯ ಧರ್ಮವನ್ನು ಪ್ರಕೃತಿಯೂ, ಪುರುಷ ಧರ್ಮವನ್ನು ಪುರು ಷನೂ ಚೆನ್ನಾಗಿ ಅನುಸರಿಸುತ್ತಿದ್ದರೆಯೇ ಸೃಷ್ಟಿನಿಯಮವನ್ನು ಅನುಸರಿಸಿ ನಡೆದಂತಾಗುವುದು. ಸಹಜ ಭಾವದಿಂದ ವಿಮರ್ಶಿಸಿದರೆ, ಕೋಮಲತೆ, ಶಾಂತತೆ, ಉದಾರಪರತೆಗಳು ಪ್ರಕೃತಿಯ ನೈಸರ್ಗಿಕ ಗುಣಗಳೆನಿಸಿರುವು ವೆಂದು ತಿಳಿಯಬರುವುದು. ಪ್ರಕೃತಿಯ ನೈಸರ್ಗಿಕ ಗುಣಗಳೆಲ್ಲವೂ ಸ್ತ್ರೀಯರಲ್ಲಿದ್ದೇ ಇರಬೇಕೆಂದೂ, ಸ್ತ್ರೀಯೇ ಪ್ರಕೃತಿಯ ಸ್ವರೂಪವೆಂದೂ

ಮಾರ್ಗದರ್ಶಕರಾದ ಪಂಡಿತರು ಹೇಳುತ್ತಿರುವರು. ಪ್ರಕೃತಿ ಸ್ವರೂಪಿಣಿಯು ರಾದ ಈ ಸ್ತ್ರೀಯರು ಪುರುಷರ ಕಾರ್ಯಕ್ಕೆ ಪ್ರೋತ್ಸಾಹಕರೂ ಸಹಾಯ ಕರೂ ಆಗಿ, ಪುರುಷರ ಭಾಗ್ಯವನ್ನು (ಶಕ್ತಿ, ಸಂಪತ್ತಿ) ಸಂರಕ್ಷಿಸುತ್ತಿರ ಬೇಕಾದುದೂ, ಪುರುಷನು ಸ್ತ್ರೀಯರನ್ನು ಅವರ ಪ್ರಕೃತಿ ಧರ್ಮದ ಕೋಮಲತೆಯಿಂದ ಹೊರಗಾಗದಂತೆ ನೋಡಿಕೊಳ್ಳಬೇಕಾದುದೂ ಅಗತ್ಯವು.

ಮುಖ್ಯವಾಗಿ ಇಲ್ಲಿ ಹೇಳುವದೆಂದರೆ ಇಷ್ಟೇ, '**ನಾರಿಯರಿಗೆ ಪತಿಯೊಬ್ಬನೇ ಆರಾಧ್ಯದೇವನೂ ಚಿಂತ್ಯನೂ ಭೋಕ್ತಾರನೂ ಆಗಿರುವನು. ನಾರಿಯ ಅಂತರಂಗಕ್ಕೆ ಅಧಿಪತಿಯೆಂದರೆ ಆತನೊಬ್ಬನೇ! ಎಂದರೆ ಪತಿಯನ್ನು ಹೊರತು ಉಳಿದವರೆಲ್ಲರನ್ನೂ ದ್ವೇಷಿಸಬೇಕೆಂದಾಗಲೀ ಉಪೇಕ್ಷಿಸಬೇಕೆಂದಾಗಲೀ ನಾವು ಹೇಳಿದೆವೆಂದು ಭಾವಿಸಲಾಗದು. ನಾರಿಯರಿಗೆ ಮಾತಾಪಿತೃಗಳೂ ಪತಿಯ ಮಾತಾಪಿತೃಗಳೂ ಸಂಸ್ಮರಣೀಯರೂ ಪೂಜ್ಯರೂ ಸಂಸೇವ್ಯರೂ ಆಗಿರುವರು! ಉಳಿದವರು, ಒಡಹುಟ್ಟುಗಳಂತೆಯೂ ಒಡಲಿನಲ್ಲಿ ಹುಟ್ಟಿದವರಂತೆಯೂ ನಿಷ್ಕಲ್ಮಷವಾದ ವಿಶ್ವಾಸ, ಆದರ—ಕ್ಷೇಮಚಿಂತನೆಗಳಿಗೆ ಅರ್ಹರು, ಇದೇ ಸತಿಯರ ಸೂಕ್ಷ್ಮ ಧರ್ಮವು.** ಈ ಧರ್ಮಜ್ಞಾನವು ಅವರಲ್ಲಿ ಸ್ಥಿರವಾಗಿ ನಿಲ್ಲಬೇಕಾದರೆ, ಅವರ ಬುದ್ಧಿಯು ಪರಿಪಕ್ವವಾಗಿರಬೇಕು. ಬುದ್ಧಿ ಪರಿಪಕ್ವ ಸ್ಥಿತಿಗೆ ಬಂದಲ್ಲದೆ ಮೇಲೆ ಹೇಳಿದ ಜ್ಞಾನವು ಸ್ಥಿರವಾಗಿರಲಾರದು. ಬುದ್ಧಿ ಪರಿಪಕ್ವಕ್ಕೆ ಗುರುಕೃಪೆಯೇ ಆಧಾರವು. ಆರ್ಯಧರ್ಮದಲ್ಲಿ ಸ್ತ್ರೀಯರಿಗೆ ಕೈಹಿಡಿದ ಸ್ವಾಮಿಯೇ ಬುದ್ಧಿವಿಕಾಸವನ್ನುಂಟುಮಾಡುವ ಮತ್ತು ನಿರಾತಂಕವಾದ ಆನಂದವನ್ನುಂಟುಮಾಡುವ ಗುರುವು. ಆತನ ಸಹಚರ್ಯೆಯೇ ಅವಳ ಅಭ್ಯಾಸ–ಗುರುಸೇವೆ, ನಿತ್ಯ ಕೈಂಕರ್ಯವೆನಿಸುವುದು. ಇದನ್ನು ಬಿಟ್ಟು ತಾನು ನಾಲ್ಕಾರು ಪುಸ್ತಕ ಪಾಠಗಳಿಂದ ವಾಚಾಳತೆಯನ್ನೂ ಒಂದೆರಡು ಕಲಾಭ್ಯಾಸದಿಂದ ಕೌಶಲ್ಯವನ್ನೂ ಹೊಂದಿದ ಮಾತ್ರಕ್ಕೆ ಅಹಂಕಾರದಿಂದ ಬೇಗ ಮರ್ಯಾದೆಯನ್ನು ಮೀರಿ ನಡೆಯುವ ಸ್ತ್ರೀಯು, ವೇದಾಧ್ಯಯನವನ್ನು ಬಿಟ್ಟು ಸಂಧ್ಯಾ

ವಂದನಾದಿ ಕರ್ಮಾನುಷ್ಠಾನಗಳನ್ನು ತೊರೆದ ಬ್ರಾಹ್ಮಣನು ಕರ್ಮ ಚಂಡಾಲನೆನ್ನಿಸುವಂತೆ ನೀತಿಬಾಹಿರೆಯಾದ ಇವಳೂ ಚಂಡಾಲಿನಿಯೆನಿಸು ವಳು. ವಿಚಾರ ಮಾಡುವುದಾದರೆ ಇಂತಹ ಕರ್ಮಬಾಹಿರರಿಗಿಂತಲೂ ಜನ್ಮತಃ ಚಂಡಾಲರಾಗಿ ಸ್ವಧರ್ಮ ಕರ್ಮಗಳಲ್ಲಿ ನಿರತರಾಗಿರುವವರು ಉತ್ತಮರೆಂದು ಆರ್ಯರು ಹೇಳುವರು. ಆದುದರಿಂದಲೇ ಸ್ವಚ್ಛಂದತೆಯಲ್ಲಿ ನಡೆಯಿಸುವ ಸುಶಿಕ್ಷಾರಹಿತವಾದ ಓದುಗಾರಿಕೆಯು ವಿದ್ಯೆಯೆನಿಸದೆ ಅವಿದ್ಯೆ ಅಥವಾ ವಿಪರೀತ ವಿದ್ಯೆಯೆನ್ನಿಸಿ, ಅಂತಹ ವಿದ್ಯೆಗಿಂತಲೂ ಮೂಢ ರಾಗಿರುವುದೇ ಉತ್ತಮವೆಂದೂ, ಇವರ ಪ್ರತಿಷ್ಠೆಗಿಂತಲೂ ಮೂಢರ ಮೂಢಭಕ್ತಿಯೇ ಉತ್ತಮವೆಂದೂ ಹೇಳಿಸಿಕೊಳ್ಳುವುದು. ಇಂತಹರನ್ನೇ ಮೂರ್ಖರೆಂದೂ, ಅವಿದ್ಯಾವತಿಯರೆಂದೂ, ಪಶುಸಮಾನರೆಂದೂ, ಕಾಡು ಮೃಗಗಳೆಂದೂ, ಹಲವರು ಹಲವು ಬಗೆಯಾಗಿ ದೂರುತ್ತಿರುವರು. ಇಂತಹರು ನಮ್ಮ ಸಮಾಜದಲ್ಲಿ ಅತ್ಯಲ್ಪ ಮಂದಿ ಇರಬಹುದಾದರೂ "ಕುಲಕ್ಕೆ ಮೃತ್ಯು ಕೊಡಲಿಯ ಕಾವು" ಎಂಬಂತೆ ಆ ಅಲ್ಪ ಮಂದಿಯ ಮರ್ಯಾದೋಲ್ಲಂಘನ ಕಾರ್ಯಗಳೇ ನಮ್ಮ ಸಮಾಜವನ್ನೇ ಆಕ್ರಮಿಸುತ್ತಿರುವ "ಅಬಲಾ ದೌರ್ಜನ್ಯ"ವಾಗಿ ಪರಿಣಮಿಸಿರುವುದೆಂದೂ, ಈ ದೌರ್ಜನ್ಯದ ಫಲಾನುಭವವು ಅಲಂಘ್ಯ ಮತ್ತು ಅವರ್ಣನೀಯಗಳೆಂದೂ ತಿಳಿಸಲು ವಿಷಾದಿಸಬೇಕಾಗಿದೆ.

---

## V

## ಸ್ತ್ರೀಯರ ಅವಿದ್ಯೆಗೆ ಪುರುಷರ ಉಪೇಕ್ಷೆಯೇ ಕಾರಣವು.

ಸ್ತ್ರೀಯರ ಅವಿದ್ಯೆಗೆ ಮೂಲಭೂತರಾರೆಂದು ನೋಡಿದರೆ ಪುರುಷ ರೆಂದೇ ಹೇಳಬೇಕಾಗುವುದು. ಹಾಗೆ ಹೇಳುವೆವಾದರೆ ನಮ್ಮ ಪುರುಷ ಬಾಂಧವರು ನಮ್ಮನ್ನೂ ನಮ್ಮ ನಿಷ್ಠುರ ಲೇಖನಿಯನ್ನೂ ಶಪಿಸುವರು. ಆದರೂ ನಾವು ಮಾಡುವುದೇನು? ಒಂದು ಕಾರ್ಯಕ್ಕೆ ಕೈ ನೀಡಿದೆವೆಂದರೆ ಅದರಿಂದುಂಟಾಗುವ ಕಷ್ಟನಿಷ್ಠೂರಗಳೆಲ್ಲಕ್ಕೂ ತಲೆಯೊಡ್ಡಲು ಸಿದ್ಧರಾಗಿ

ನಿಲ್ಲಲೇ ಬೇಕು ; ಆದುದರಿಂದ ನಮ್ಮ ಬಾಂಧವರ ಆಗ್ರಹಕ್ಕಾಗಲಿ, ಶಾಪನೆ ಗಳಿಗಾಗಲೀ ಭಯಪಟ್ಟು ಸುಮ್ಮನಾಗುವುದು ಸರಿಯಲ್ಲವೆಂದೂ, ಸಕಾರಣ ವಾಗಿ ಹೇಳುವ ನಮ್ಮ ಸಮಾಧಾನದ ವಾಕ್ಯಗಳನ್ನು ಮೊದಲಿಂದ ಕೊನೆಯವರೆಗೂ ತಾಳ್ಮೆಯಿಂದ ಕೇಳಿ, ಆ ಬಳಿಕ ಆಗ್ರಹಿಸುವುದನ್ನೂ ಶಪಿಸುವುದನ್ನೂ ವಿಮರ್ಶಾಪೂರ್ವಕವಾಗಿ ಮಾಡಬಹುದೆಂದೂ ನಮ್ಮ ಬಾಂಧವರಲ್ಲಿ ನಾವು ಮೊದಲು ನಿವೇದಿಸುವೆವು.

ಮೊದಲು ನಮ್ಮ ಆರ್ಯ (ಪುರುಷ) ಬಾಂಧವರನ್ನು ನಾವು ಮೂರು ಪಂಗಡವಾಗಿ ವಿಂಗಡಿಸಬೇಕು. ಹೇಗೆಂದರೆ:—

**ಉತ್ತಮ ವರ್ಗ**—ಪುರುಷ ಧರ್ಮವರಿತು, ಕರ್ತವ್ಯತತ್ಪರರಾಗಿ ಶಮದಮಾದಿಗಳಿಂದಲೂ ಸದಸದ್ವಿವೇಚನ—ಭೂತದಯೆ—ಔದಾರ್ಯ— ಗುಣಗಳಿಂದಲೂ ಐಹಿಕಾಮುಷ್ಮಿಕ ತತ್ವಜ್ಞತೆಯಿಂದಲೂ ನಿಷ್ಕಾಮಕರ್ಮಾ ಚರಣೆಯಿಂದಲೂ ವರ್ತಿಸುವ ಮಹನೀಯರೇ ಉತ್ತಮ ವರ್ಗದವರು. ಇಂತಹ ಮಹನೀಯರೇ ನಮ್ಮ ಸ್ತ್ರೀವರ್ಗವನ್ನು ಸುಸ್ಥಿತಿಗೆ ತರುವುದಕ್ಕೆ ಸಮರ್ಥರೂ, ಮಹಿಳೆಯರ ಪ್ರಾಶಸ್ತ್ಯವನ್ನು ಪ್ರದರ್ಶಿಸುವ ಪುಣ್ಯ ಪುರುಷರೂ ಆಗಿರುವರು. ಇಂತಹರು ಸದ್ಯಸ್ಥಿತಿಯಲ್ಲಿ ವಿರಳರು! ಸತ್ಪುರುಷರೂ ಚಿರಸ್ಮರಣೀಯರೂ ಅಭಿವಂದನೀಯರೂ ಆದ ಈ ಮಹಾತ್ಮರಿಗೆ ಅನಂತಕಾಲದವರೆಗೂ ನಮ್ಮ ಧನ್ಯವಾದಗಳು.

**ಮಧ್ಯಮ ವರ್ಗ**—ತಾವು ವಿದ್ಯಾಪರಿಣತರೂ ಮೇಧಾವಿಗಳೂ ಉದ್ಯಮಶೀಲರೂ ಆಗಿದ್ದರೂ ಇತರರ ಕಷ್ಟನಿವಾರಣೆಯಲ್ಲಾಗಲಿ, ಇತರರ ಶ್ರೇಯೋಭಿವೃದ್ಧಿಮಾರ್ಗದಲ್ಲಿಯಾಗಲಿ ಗಮನವಿಲ್ಲದೆ ಕೇವಲ ತಮ್ಮ ದೇಹ, ತಮ್ಮ ಆತ್ಮ ಇವುಗಳ ಶಾಂತತೆಯ ವಿಷಯದಲ್ಲಿ ಮಾತ್ರವೇ ನಿರತ ರಾಗಿರುವರು. ಇಂತಹರಿಂದ ಅನ್ಯರಿಗೆ ಹಾನಿ ಲಾಭಗಳೇನೂ ಉಂಟಾಗು ವಂತಿಲ್ಲ. ಇವರೇ ಮಧ್ಯಮ ವರ್ಗದವರು. ಈ ಮಧ್ಯಮ ವರ್ಗದ ಪುರುಷರು, ಸ್ತ್ರೀಯರಲ್ಲಿ ಅಭಿಮಾನ-ಆದರಗಳುಳ್ಳವರಾಗಿದ್ದರೂ ಅವರ ದೌರ್ಜನ್ಯ ನಿವಾರಣೆಗೆ ಅಷ್ಟಾಗಿ ಪ್ರವರ್ತಿಸಲಾರರು ; ಮೇಲ್ಕಂಡ ಮಹನೀಯರ

ಪ್ರಯತ್ನಕ್ಕೆ ಸಾನುಭೂತಿಯನ್ನು ಪ್ರದರ್ಶಿಸುವುದೊಂದನ್ನು ಮಾತ್ರ ಬಲ್ಲರು. ಇದೂ ಒಂದು ಬಗೆಯಿಂದ ಉಪಕಾರವೇ ಸರಿ!

ಇನ್ನು ಕಡೆಯ ವರ್ಗಕ್ಕೆ ಸೇರಿದ ಪುರುಷರಲ್ಲಿ, ಕೆಲವರು ತಾವು ಪಾಂಡಿತ್ಯವುಳ್ಳವರೂ, ವಾಕ್ ಪೌರುಷದಿಂದ ಜೀವಿಸುವರೂ, ಸ್ವಾತಂತ್ರ್ಯ ಸಂಪತ್ತಿಯುಳ್ಳವರೂ ಆಗಿದ್ದರೂ ಪ್ರಕೃತಿ ಧರ್ಮದ ಕಡೆಗೆ ತಮ್ಮ ಸೂಕ್ಷ್ಮ ದೃಷ್ಟಿಯನ್ನು ಹೋಗಗೊಡದೆ, ಸ್ವಪ್ರತಿಷ್ಠೆ, ಸ್ವಾರ್ಥಪರತೆ ಗಳಿಂದಲೇ ತುಂಬಿದವರಾಗಿರುವರು. ಮತ್ತೆ ಕೆಲವರು, ವಿದ್ಯಾ ಪಾಂಡಿತ್ಯ, ವಾಚಾಳತೆ, ಊಹಾಪೋಹ, ಸ್ವರೂಪಜ್ಞಾನಗಳಾವುದೊಂದೂ ಇಲ್ಲದೆ, ಕೇವಲ ದಿನಗಳೆಯುವುದರಲ್ಲಿಯೂ, ಹೊಟ್ಟೆಗೆ ತುಂಬುವುದರಲ್ಲಿಯೂ ಅಷ್ಟೇ ನಿಪುಣರಾಗಿರುವರು. ಹೀಗೆ ಎರಡು ಬಗೆಯಾಗಿರುವವರಲ್ಲಿ,—ಮೊದಲಿನವರು ಸ್ತ್ರೀವರ್ಗವನ್ನು ನಿರ್ಬಂಧದಲ್ಲಿರಿಸಿ ಅವರ ದೌರ್ಜನ್ಯ ದೌರ್ಭಾಗ್ಯ ಗಳಿಗೆ ಹೇತುಭೂತರಾಗಿ ಅದರ ಫಲಾನುಭವವನ್ನು ತಾವೇ ಅನುಭವಿಸುತ್ತ ನರಳುತ್ತಿರುವರು. ಇವರು ಮಾಡಿ—ಮಾಡುತ್ತಿರುವ ನಿರ್ಬಂಧಗಳಲ್ಲಿ ಆವುದೇ ಒಂದು ಬಗೆಯ ಸಾಧಕವೂ ಇಲ್ಲದೆ ಬಾಧಕವೂ ಕ್ರೂರತನವೂ ತುಂಬಿರುವುವು.

ಸ್ತ್ರೀಯರು ತಮ್ಮ ಪುರುಷರ ನಿರ್ಮಲ ನಿಷ್ಕಪಟ ವಿಶ್ವಾಸಕ್ಕೆ ತಾವೇ ಒಳಪಟ್ಟು ವಿಧೇಯರಾಗಿ ವರ್ತಿಸುವಂತೆ ಮಾಡಿಕೊಳ್ಳುವುದು ಪುರುಷರ ಕೈಯಲ್ಲಿದ್ದರೂ ಅವರು ಆ ಮಾರ್ಗವನ್ನು ಬಿಟ್ಟು ಅವರನ್ನು ಕಠಿನವಾದ ನಿರ್ಬಂಧಕ್ಕೆ ಗುರಿಪಡಿಸಿದರೆ ಸರಲಮನಸ್ಸಿನ ಸ್ತ್ರೀಯರ ಕೋಮಲಭಾವಕ್ಕೆ ಮುಳ್ಳು ಹತ್ತಿದಂತಾಗಿ, ಅವರು ಪ್ರಯತ್ನಪೂರ್ವಕ ವಾಗಿ ಸುಳ್ಳು, ಮೋಸ, ಬೂಟಕ, ದ್ರೋಹಚಿಂತನೆಗಳನ್ನು ಕ್ರಮವಾಗಿ ಅಭ್ಯಸಿಸುವರು. ಇದನ್ನರಿಯದೆ ಅವರನ್ನು ವಾಗ್ದಂಡದಿಂದಲೂ, ದುರ್ಭಾಷೆ ಗಳಿಂದಲೂ, ಪ್ರಹಾರಗಳಿಂದಲೂ, ಇನ್ನೂ ಇತರ ಕ್ಷುದ್ರ—ಅಜ್ಞಾನಕೃತ ತಪ್ಪಿಗಾಗಿ—ಅಸಹನೀಯವಾಗಿ ಶಿಕ್ಷೆಗಳನ್ನು ವಿಧಿಸುವುದರಿಂದಲೂ ನಿಷ್ಠುರರಾಗಿ ನಡೆಯುತ್ತ ಬಂದರೆ, ಪಾಪ, ಅವರೇನುಮಾಡಬೇಕು? ತಮ್ಮ ತಪ್ಪುಗಳನ್ನು ಬಚ್ಚಿಡುವರು, ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಮೇಲೆ

ಹೇಳಿದಂತೆ ನಾಟಕದ ಬೂಟಕವನ್ನೇ ತೋರುವರು....ತಮ್ಮ ಅಭಿವೃದ್ಧಿಗೆ. ಸ್ತ್ರೀಯರೇ ಆಧಾರಸ್ವರೂಪಿಣಿಯರೆಂದೂ, ಅವರನ್ನು ಪರಿಶುದ್ಧ ಸ್ಥಿತಿಯಲ್ಲಿರಿಸಿಕೊಂಡರೆ ಅವರು ತಮ್ಮ ಇಹಪರ ಸುಖಗಳಿಗೂ ಸಾಧಕರಾಗಿ ನಿಲ್ಲುವರೆಂದೂ ಇವರು ತಿಳಿಯಲಾರದೆ, ಅವರು ಅವಿದ್ಯೆ-ಅವಿಚಾರಗಳಿಂದ ಆನಂದೋತ್ಸಾಹಗಳ ಲೇಶವೂ ಇಲ್ಲದೆ ಕಷ್ಟಜೀವಿಗಳಾಗಿಯೇ ಇರಲೆಂಬ ಭಾವದಿಂದ ಅವರನ್ನು ಪುರಸ್ಕರಿಸುವ ಮಾತು ಹಾಗಿರಲಿ, ಕೇವಲ ತುಚ್ಛ ಮೃಗಜಾತಿಗಳನ್ನು ಕಾಣುವಂತೆ ಕಡೆಗಣಿಸುತ್ತಿರುವುದರ ಫಲಾನುಭವವು ಯಾರ ಪಾಲಿಗೆ ?

ಆವುದೇ ಒಂದು ಗೃಹಕಾರ್‍ಯವೂ ಸ್ತ್ರೀಯರನ್ನೇ ಅವಲಂಬಿಸಿರುವದು.. ಸ್ತ್ರೀಯರಿಂದಲೇ ಗೃಹಕಾರ್‍ಯವು ನಿರ್ವಹಿಸಲ್ಪಡುವುದು. ಆವ ಗೃಹವು ಗೃಹಿಣಿಯಿಂದ ರಹಿತವಾಗಿ, ದಕ್ಷಳಾದ ಸ್ತ್ರೀಯ ವಿಚಾರಕ್ಕೊಳಪಡದಿರುವುದೋ ಆ ಗೃಹಕಾರ್‍ಯವು ಸುಲಲಿತವಾಗಿಯಾಗಲಿ, ಸಮರ್ಪಕ ರೀತಿಯಿಂದಾಗಲಿ ನಿರ್ವಾಹವಾಗುವುದಿಲ್ಲ. ಅದರಲ್ಲಿ ಅನೇಕ ಕೊರತೆಗಳಿದ್ದೇ ಇರುತ್ತವೆ. ಹಾಗೆ ಅತ್ಯಗತ್ಯವಾಗಿ ಅವಲಂಬಿಸಲ್ಪಡಬೇಕಾದ ಸಹಕಾರೀ ಪಾತ್ರವು ಪರಿಶುದ್ಧವಾಗಿಯೂ ತನ್ನ ಪುರೋವೃದ್ಧಿಗೆ ಬೇಕಾದ ಸಲಕರಣೆಗಳನ್ನೊದಗಿಸಲು ಸಮರ್ಥವಾಗಿಯೂ ಇರಬೇಕಲ್ಲವೇ? ಹಾಗಿಲ್ಲದೆ. ಅದರಲ್ಲಿ ಅಲ್ಪಸ್ವಲ್ಪ ದುಷ್ಟ ಕಣಗಳಿಗೆ ಅವಕಾಶಕೊಟ್ಟರೂ ವಿಷವು ಕ್ಷಣಕ್ಷಣಕ್ಕೂ ವ್ಯಾಪಿಸುವಂತೆ ಮಹತ್ತಾಗಿ ತನ್ನನ್ನೂ ತನ್ನನ್ನು ಸೇರಿದವರನ್ನೂ ಕೂಡಿಯೇ—ಇಂದಲ್ಲದಿದ್ದರೆ, ಮುಂದೆಯಾದರೂ ಕ್ಲೇಶಕ್ಕೆ ಗುರಿಮಾಡದಿರಲಾರದಲ್ಲವೆ? ಭ್ರಾತೃಗಳೇ! ವಿಚಾರಮಾಡಿರಿ? ಪುರುಷನ. ಚತುರ್ವಿಧ ಪುರುಷಾರ್ಥ ಸಾಧನೆಗೂ ಸ್ತ್ರೀಯೇ ಕಾರಣವೆಂದಬಳಿಕ ಆ ನಾರಿಯರು ಅಕುಟಿಲ, ಅಚ್ಛಿನ್ನ-ಅಕ್ಷಯವಾದ ಪ್ರೀತಿಯಿಂದಲೂ ನಮ್ರತೆಯಿಂದಲೂ ಹಿತಚಿಂತನೆಯಿಂದಲೂ ತನಗೆ ಶಕ್ತಿಯನ್ನು ಉತ್ತೇಜನಗೊಳಿಸುತ್ತಿರುವಂತೆ ಮಾಡಬೇಕಾದರೆ ಅವಳಲ್ಲಿ ಪುರುಷನು ಹೇಗೆ. ನಡೆಯಬೇಕು ? ತನ್ನನ್ನೇ ನಂಬಿ ಬರುವ ನಾರಿಯರಲ್ಲಿ, ನಿಜವಾದ ಅಂತರಂಗವನ್ನೊಪ್ಪಿಸಿ, ಅವಳ ಬುದ್ಧಿ-ಜ್ಞಾನ-ಕೌಶಲ್ಯಗಳು ವಿಕಾಸಹೊಂದುವಂತೆ ನಯನೀತಿವಚನಗಳನ್ನು ಹೇಳುತ್ತ ಅವರನ್ನು ಪ್ರಜ್ಞಾವಂತರ

ನ್ನಾಗಿ ಮಾಡಬೇಕಲ್ಲದೆ ನಿರ್ಬಂಧಿಸುವುದು ಅನರ್ಥಕ್ಕೆ ಕಾರಣವೆಂದರೆ ಪುನರುಕ್ತಿಯಲ್ಲವೆ?

ಇನ್ನು ಮೂರನೆ ವರ್ಗದ ಕನಿಷ್ಟಪಕ್ಷದವರನ್ನು ಕುರಿತು ಹೇಳುವು ದೊಂದುಳಿದಿತು. ಆದರೆ, ಇವರನ್ನು ಹೇಗೆ ಕರೆಯಬೇಕೋ ನಮಗದೇ ತಿಳಿಯಲಿಲ್ಲ. ಏಕೆಂದರೆ, **'ಹೆಂಡಿತಿ ಹೆಗ್ಗಡೆಯಾದರೆ ಗಂಡ ಮೂಳ ನಾಯಿಗೂ ಕಡೆ'** ಎಂಬ ಗಾದೆಯಂತೆ ಹೆಂಡಿರ ದಾಸಾನುದಾಸ ನಾಗಿ ಅವರಿಟ್ಟ ಗೆರೆಯನ್ನು (ಅದು ತನ್ನ ಪುರುಷ–ಮಾನವ–ಕರ್ತವ್ಯಕ್ಕೆ ಲೋಪವಾಗುವಂತಿದ್ದರೂ) ಏಾರಲಾರದೆ ಭಗವತ್ಕೃಪಾದತ್ತವಾದ ಶಕ್ತಿ, ಮೇಧಾ ಇಂದ್ರಿಯಗಳ ಪಟುತೆಗಳಿದ್ದೂ ವಿಕಲಾಂಗರಂತೆ ಕರ್ತವ್ಯಪರಾಙ್ಮುಖರಾಗಿರುವವರನ್ನು ಹೇಗೆ ಸಂಬೋಧಿಸಬೇಕೋ ತಿಳಿಯಲಿಲ್ಲ?

ಆದರೆ ಮಾಡುವುದೇನು? ಸ್ವಯಂಕೃತಾಪರಾಧದ ಫಲವು ಎಂದಿಗೂ ತಪ್ಪದು? ಅದೇನೆನ್ನುವಿರಿ? ಪ್ರಾಯಃ ಸ್ತ್ರೀಯರ ಚಿತ್ತವೇ ಚಂಚಲವು. (ಕೆಲವು ಸಂದರ್ಭಗಳಲ್ಲಿ ಸ್ತ್ರೀಯರ ಹೃದಯವು ಕಠಿನಾತ್ ಕಠಿನತರವೇ ಆಗುವುದು.) ಅದು ಆರಂಭದಿಂದಲೂ ಎಂದರೆ ಮಾತು ಕಲಿತುದು ಮೊದಲು ತಾಯಿತಂದೆಯರ ನೈತಿಕ ಶಿಕ್ಷಣೆಗೊಳಪಡದೆ ಲಾಲನೆಯಿಂದಲೂ ಹೊಗಳಿಕೆ ಯಿಂದಲೂ ಬೆಳೆದರೆ ಒಂದು ವಿಧವಾದ ಗರ್ವವು (ಅಭಿಮಾನವು) ಹುಟ್ಟು ವುದು. ಈ ಗರ್ವವು ಪತಿ ಗೃಹಕ್ಕೆ ಬರುವ ಮೊದಲು ತಾಯಿಯ ಬಳಿಯ ಲ್ಲಿದ್ದಾಗ ಅಷ್ಟು ಬಾಧಕವಾಗುವುದಿಲ್ಲ; ಪತಿಯ ಮನೆಗೆ ಬಂದಮೇಲೆ ಅದು ತನ್ನ ಗುಣವನ್ನು ಪ್ರಕಟಿಸುವುದು. ಈ ಗರ್ವವೇ ತನ್ನ ಪತಿಯ ತೇಜೋಭಂಗಮಾಡುವುದಕ್ಕೂ ತವರ್ಮನೆಯ ಸುಖವನ್ನು ಉಗ್ಗಡಿಸುತ್ತ ಅತ್ತೆಯ ಮನೆಯಲ್ಲಿ ಕೆಲಸಕ್ಕೆ ವೈಗಳ್ಳತನಮಾಡುವುದು, ಅತ್ತೆ ಮೊದ ಲಾದವರ ಮೇಲೆ ದೂರುಹೇಳುವುದಕ್ಕೂ ಕಾರಣವಾಗುವುದು. ಪತಿಯು ಸುಶಿಕ್ಷಿತನೂ ದಕ್ಷನೂ ಆಗಿದ್ದರೆ ಮಾತ್ರ ಇಷ್ಟಕ್ಕೆ ಅವಕಾಶವಾಗುವುದಿಲ್ಲ; ಎಂದರೆ ಅಭಿಮಾನವು ಸಂಪೂರ್ಣವಾಗಿ ಹೋಗುವುದಿಲ್ಲವಾದರೂ ಅದರಿಂದ ಇತರರಿಗೆ ಹಾನಿಯಾಗದೆ ಕೇವಲ ಪತಿಯ ಮನಸ್ಸಿಗೆ ಮಾತ್ರ ಆಯಾಸ ವಾಗುವಂತೆ ಮಾಡುವುದು. ಅದು ಹೇಗೆ–ಎಂತು–ಎಂಬುದನ್ನಿಲ್ಲಿ ನಿದರ್ಶಿಸು

ವುದಕ್ಕಿಂತಲೂ ಅಭಿಮಾನವತಿಯರಾದ ಪತ್ನಿಯರು ತಮ್ಮ ವಿಷಯದಲ್ಲಿ ಅಡಿಗಡಿಗೆ ತೋರುತ್ತಿರುವ ಶಠತೆಗಳಿಂದಲೂ ತಮ್ಮ ಅಭಿಮಾನದಿಂದ ತಮ್ಮ ವಿಷಯದಲ್ಲಿ ತಾವೇ ತೋರುವ ಕ್ರೂರತನಗಳಿಂದಲೂ (ಉಪವಾಸ, ಜಾಗರಾದಿ ಕ್ಲೇಶಗಳನ್ನು ಅನುಭವಿಸುವುದು.) ಪತಿಗಳ ಮನಸ್ಸಿಗೆ ಹೇಗೆ ಆಯಾಸಪಡಿಸುವರೆಂಬುದನ್ನು ಅಡಿಗಡಿಗೆ ಅನುಭವಿಸುತ್ತಿರುವವರೇ ಊಹಿಸಬೇಕಾಗಿದೆ.

ಹೀಗೆ ಮೊದಲೇ ಅಭಿಮಾನದಿಂದ ಬೀಗಿದ ಸ್ತ್ರೀಯನ್ನು ಪತಿಯಾದವನು ಮುಖಸ್ತುತಿಯಿಂದ ಮತ್ತಷ್ಟು ಉಬ್ಬಿಸುವುದು, ಬಹುಮಾನದ ನೆವದಿಂದ ತನ್ನ ಯೋಗ್ಯತೆಯನ್ನು ವಿಾರಿ ಪತ್ನಿಯ ಸಂತೋಷಕ್ಕೆಂದು ಅವಳು ಕೋರಿದ ವಸ್ತುಗಳನ್ನು ತಂದೊಪ್ಪಿಸುವುದು, ಪತ್ನಿಯ ಮುಖೋಲ್ಲಾಸಕ್ಕಾಗಿ ಅವಳ ಮುಂದೆ ಅತಿಯಾದ ಹಾಸ್ಯ ನಟನೆಗಳನ್ನು ಪ್ರದರ್ಶಿಸುವುದು, ಕೋಮಲೆಯಾದ ಪತ್ನಿಗೆ ಆಯಾಸವಾಗದಿರಲೆಂದು ಅವಳನ್ನು ಕುಳ್ಳಿರಿಸಿ, ತಾನು ಗೃಹಕಾರ್ಯಗಳನ್ನು ಮಾಡುವುದಲ್ಲದೆ ಅವಳ ಉಪಚಾರಕ್ಕೂ ತೊಡಗುವುದು—ಇವೇ ಮೊದಲಾದವುಗಳಿಂದ ಪತ್ನಿಯರನ್ನು ಮದಿಸುವಂತೆ ಮಾಡಿಬಿಟ್ಟರೆ ಮದಿಸಿದ ಆ ಅಂಗನೆಯರು ವಿದ್ಯಾವತಿಯರಾಗಿರಲಿ, ವಿದ್ಯೆಯಿಲ್ಲದವರಾಗಿರಲಿ, ಹೇಗಿದ್ದರೂ ಮೇಲೆ ಹೇಳಿದ ವರ್ತನೆಯಿಂದ ಮತ್ತೆಯರಾಗಿ ಪತಿಗಳನ್ನು ತಮ್ಮ ಆಜ್ಞಾಧಾರಿಗಳನ್ನಾಗಿಯೂ ಇತರರನ್ನು ತಮ್ಮ ಊಳಿಗದವರನ್ನಾಗಿಯೂ ಭಾವಿಸುವರಾಗುವರು. ಇದರಿಂದಲೇ ಬುದ್ಧಿಶಾಲಿಗಳು, ಪತ್ನಿಯರಲ್ಲಿ ಆಂತರಿಕ ಸ್ನೇಹವಿರಿಸಿದ್ದರೂ ಅವರನ್ನು ಎಷ್ಟುಮಟ್ಟಿಗೆ ಆದರ–ವಿಶ್ವಾಸ ಗೌರವ ಬುದ್ಧಿಗಳಿಂದ ನೋಡಬೇಕೋ ಅಷ್ಟಲ್ಲದೆ ತಮ್ಮ ಜೀವನದಮೇಲಿನ ಸರ್ವಸ್ವಾತಂತ್ರ್ಯವನ್ನೂ ಅವರಿಗೆ ಒಪ್ಪಿಸುವಷ್ಟು ಹೀನಸ್ಥಿತಿಗೆ ಮಾತ್ರ ಬರಬಾರದೆನ್ನುವರು. ಪ್ರಾರಂಭದಲ್ಲಿ ಮೇಲೆ ಹೇಳಿದಂತೆ ಮಾಡಿ, ಆ ಬಳಿಕ ಬೀಗಿ ಕುಳಿತು, ಇಲ್ಲವೆ ಇನ್ನೂ ಇತರ ವಿಧವಾದ ಹಿಂಸೆಗಳನ್ನು ಕೊಡುವ ಪತ್ನಿಯರ ವಿಷಯದಲ್ಲಿ ಕಡೆಗೆ ಕೋಪಗೊಳ್ಳುವುದಾಗಲಿ, ವಿರಕ್ತರಾಗಿ ಹೋಗುವುದಾಗಲಿ, ಅವರನ್ನು ವಾಗ್ದಂಡನಗಳಿಂದಲಾಗಲಿ, ಕ್ರೂರವಾಗಿ ದಂಡಿಸಲು ಪ್ರಯತ್ನಿಸುವುದಾಗಲಿ ಉಚಿತವಲ್ಲ. ಮೇಲೆ ಹೇಳಿದಂತೆ ಪ್ರಾರಂಭದಿಂದಲೂ

ಪತ್ನಿಯರನ್ನು ಉಬ್ಬಿಸಿ, ಅವರ ಮನಸ್ಸಂತೋಷಕ್ಕಾಗಿ ಬೇಕಾದ ಆಟ ಪಾಟಗಳಲ್ಲಿ ಬೆರೆದು, ಅವರು ಕೇಳಿದುದನ್ನು ತಮ್ಮ ದೇಹವನ್ನು ಒತ್ತೆ ಯಿಟ್ಟಾದರೂ ತಂದಿತ್ತು, ಅವರ ಮನೋಲ್ಲಾಸಕ್ಕಾಗಿ ತಮ್ಮ ತಾಯಿ ತಂದೆ ಒಡಹುಟ್ಟಿದವರನ್ನೂ ತೊರೆದು, ಕಡೆಗೆ, ಎಂದರೆ, ತಮ್ಮ ವರ್ತನದ ವಿಷಯಕವಾಗಿ ಜ್ಞಾನೋದಯವಾದಮೇಲೆ ಪತ್ನಿಯರನ್ನು ಕುರಿತು ನಿಷ್ಠುರವಾಡುತ್ತಲೂ, ತಮ್ಮ ಕರ್ತವ್ಯಪರಾಙ್ಮುಖತೆಗಾಗಿ ಪಶ್ಚಾತ್ತಾಪ ಪಡುತ್ತಲೂ ಇರುವುದನ್ನು ನಾವು ಅಲ್ಲಿಗಲ್ಲಿಗೆ ನೋಡಿಯೂ ನೋಡುತ್ತಲೂ ಇರುವೆವು.

---

## VI

### ಅಶಿಕ್ಷೆಯ ಅಲಂಘ್ಯ ಫಲ.

ಪುರುಷರ ಉಪೇಕ್ಷೆ ಮತ್ತು ಅಶಿಕ್ಷೆಗಳ ಫಲವು ಇಷ್ಟಕ್ಕೆ ಮುಗಿ ದಂತಾಗಲಿಲ್ಲ. ಹಲವುಕಡೆ ಹಲವು ರೂಪುಗಳನ್ನು ಧರಿಸಿ, ತಮ್ಮ ತಮ್ಮ ಸಮಾಜದ, ಕಡೆಗೆ ತಮ್ಮ ದೇಶಕ್ಕೂ ಲಾಂಛನಾಸ್ಪದವಾಗಿ ತಿರುಗುವುದು. ಉದಾಹರಣೆಗೆಂದರೆ:—

ಪತ್ನಿಯು ಓದು ಬರೆಹ ಕಲಿತವಳೆಂದು ಹಿಗ್ಗಿ, ಮೊದಮೊದಲು ಅವಳ ವ್ಯಾಸಂಗಕ್ಕೆ ವಿಘ್ನ ಬಾರದಂತೆ ಸಹಾಯಕನಾಗುತ್ತಿದ್ದು, ಬರುಬರುತ್ತ ಪತ್ನಿಯು ವಿದ್ಯಾವತಿಯೆಂಬ ಆನಂದದಿಂದ ಹಿಗ್ಗಿ ಅವಳನ್ನು ಪ್ರಯಾಸ ಕಾರ್ಯಕ್ಕೆ ಕೈಹಾಕದಂತೆ ಮಾಡಿ ತಾನೇ ಅವಳಿಗೆ ಪರಿಚರ್ಯೆಯನ್ನು ಮಾಡುತ್ತ ಪತ್ನಿಯು ವಿದ್ಯಾಪರಿಶ್ರಮ ಹೊಂದಿ, ವೇತನವನ್ನು ಪಡೆದು ಸಂಸಾರಕ್ಕೆ ತಂದುಹಾಕುತ್ತಿದ್ದರೆ ತಾನು ಅಡುವಳನೂ ಹುಡುಗರನ್ನು ಆಡಿಸುವನೂ ಆಗಿ ಪತ್ನಿಯ ಠೀವಿಯನ್ನು ನೋಡಿ ನೋಡಿ ಹಿಗ್ಗುತ್ತಿರುವ, ಸ್ವರೂಪ ಜ್ಞಾನವಿಲ್ಲದ ಪುರುಷರೂ ಪತಿಯನ್ನು ಜನ ನಿಂದೆಗೆ ಗುರಿಮಾಡಿ ಮೇಲೆ ಹೇಳಿದಂತೆ ವರ್ತಿಸುವ ಮಾನಿನಿಯರೂ ನಮ್ಮವರಲ್ಲಿ ಎಷ್ಟೋ ಮಂದಿ ಇರುವರಲ್ಲವೆ? ಇಂತಹ ದೇವೀದಾಸರಾಗಿ, ದೇವಿಯು ಆವ ಕಾಲಕ್ಕೆ ಆವ

ರೀತಿ ಆಗ್ರಹಮಾಡುವಳೋ ಎಂಬ ಭೀತಿಯಿಂದ ತದೇಕಚಿತ್ತರಾಗಿ ಭಗವದಾಜ್ಞೆ–ಸೃಷ್ಟಿ ನಿಯಮಗಳನ್ನು ಉಲ್ಲಂಘಿಸಿ, ದೇವಿಯ ಮನೋನುಸಾರವಾಗಿ ನಡೆವುದೇ ಜನ್ಮಸಾರ್ಥಕತೆಯೆಂದೂ, ಇದನ್ನು ಬಿಟ್ಟರೆ ಅಧೋಗತಿಯೆಂದೂ ನೆನೆದು ಸರ್ವದಾ ದೇವ್ಯುಪಾಸನೆಯಲ್ಲಿಯೇ ಇರುವ ಪುರುಷ ಮಹಾಶಯರೊಂದು ಕಡೆಯಿದ್ದರೆ, ಮತ್ತೊಂದು ಕಡೆ, ಪತಿಗಳನ್ನು (ಕಾರ್ಯತಃ) ದಾಸಾನುದಾಸರನ್ನಾಗಿ ಮಾಡಿಕೊಂಡು ಅವರ ಸ್ವಾತಂತ್ರ್ಯ, ಬುದ್ಧಿ, ಮೇಧಾ ಜ್ಞಾನ ಬಲಗಳೆಲ್ಲವನ್ನೂ ಕೇವಲ ವಿಲಾಸ, ಉದರಂಭರಣ, ವಿಷಯತೃಪ್ತಿಗಳಲ್ಲಿಯೇ ಸವೆಯುವಂತೆ ಮಾಡಿರುವ ಹೆಂಗಸರೂ ಇರುವರು. ಇಂಥವರನ್ನು ನಾವು ಆವ ಅನ್ವರ್ಥನಾಮದಿಂದ ಸಂಬೋಧಿಸಿ ಈ ಲೇಖನಿಯನ್ನು ಧನ್ಯವೆನಿಸುವ?

**'ಮಹಿಳಾ'**—ಇಲ್ಲ, ಮಹಿಳೆಗೆ ಬೇಕಾದ ಮಾನ, ತಾಳ್ಮೆ, ನಲ್ಮೆಗಳು ಇವರಲ್ಲಿಲ್ಲ. ಮನಸ್ಥೈರ್ಯವಿಲ್ಲದಿವರನ್ನು ಮಹಿಳೆಯರೆನ್ನುವುದೆಂತು?

**'ಭಾಮಾ'**—ಪ್ರಕಾಶಮಯವಾದ ಬುದ್ಧಿಯೂ ಭಾವಶುದ್ಧಿಯೂ ಇಲ್ಲದವರು ಭಾಮೆಯರೆನ್ನಿಸುವುದೆಂತು?

**'ವಧೂ'**—ವಿದ್ಯಾ, ವಿನಯ ವಿವೇಚನಗಳೇ ಇಲ್ಲದವರನ್ನು ವಧೂಗಳೆನ್ನುವುದೇ?

**'ಸತೀ'**—ಸ್ತ್ರೀ ಧರ್ಮ, ಧ್ಯೇಯ, ಕರ್ತವ್ಯಗಳ ಜ್ಞಾನವೇ ಇಲ್ಲದವರು ಸತೀ ಶಬ್ದಕ್ಕೆ ಪಾತ್ರರಾಗುವುದಾದರೂ ಹೇಗೆ? ಇನ್ನೇನು ಮಾಡುವ? ಆವುದನ್ನು ನೋಡಿದರೂ ಸರಿಹೋಗುವುದಿಲ್ಲ. ಭಾರ್ಯಾ, ಪತ್ನೀ, ಸಖೀ, ಸಹಚಾರಿಣೀ, ಕಾಂತಾ, ನಾರೀ, ಆರ್ಯಾ—ಇತ್ಯಾದಿ ಶಬ್ದಗಳಿಂದ ಅಲಂಕೃತೆಯರಾಗುವುದೆಂತೂ ಅವರ ಅದೃಷ್ಟಕ್ಕೆ ಬಹುದೂರದಲ್ಲಿರುವುದೆಂದು ಭಾವಿಸಬೇಕಾಗಿದೆ. ಅಂತಹ 'ಪ್ರಬಲೆ'–'ಅತಿಬಲೆ'ಯರಾದ ಯುವತಿಯರ ವಿಷಯದಲ್ಲಿ ನಾವು ಹೇಳುವುದೇನಿದೆ? ತಮ್ಮ ಗೃಹಿಣೀ ಪದವಿಗೆ ಹಾನಿಕರವಾದ ಮೇಲಿನ ದೋಷಗಳನ್ನು ಎಂದರೆ ನ್ಯೂನಾತಿರಿಕ್ತಗಳಾದ ನಡತೆಗಳನ್ನು ಕ್ರಮಪಡಿಸಿಕೊಂಡಲ್ಲದೆ, ಸ್ತ್ರೀಜಗತ್ತನ್ನೇ ನುಂಗುತ್ತಿರುವ ದೌರ್ಜನ್ಯವಾಗಲೀ—ಅದರಿಂದ ಹುಟ್ಟುವ ದೌರ್ಭಾಗ್ಯ

ವಾಗಲೀ ನಿವಾರಣವಾಗುವಂತಾಗುವುದಿಲ್ಲ. ದೌರ್ಜನ್ಯ ದೌರ್ಭಾಗ್ಯಗಳಿಗೆ ಈಡಾಗಿರುವ ಈ ನಮ್ಮ ದೇಶದಲ್ಲಿ ಶಾಂತಿ, ಸಂಪತ್ತುಗಳ, ಅಭ್ಯುದಯದ ಆಶೆಯಾದರೂ ಎಲ್ಲಿರುವುದು? ಆದರೆ ಈಗ ಮಾಡುವುದಾದರೂ ಏನು? ಬಲಿತ ಬಿದಿರನ್ನು ಬಗ್ಗಿಸಲು ಬರುವದಿಲ್ಲ; ಎಳೆಯ ಬಿದಿರನ್ನೇ ಬಗ್ಗಿಸಿ ಹದಮಾಡಿಕೊಳ್ಳಬೇಕು. ಎಂದರೆ, ಈವರೆಗೆ ಮಿರಿಹೋಗಿರುವ ದೌರ್ಜನ್ಯ ವನ್ನು ಕ್ರಮಕ್ಕೆ ತರುವುದು ದುರ್ಘಟವು. ಆದರೆ ಇನ್ನೂ ದೌರ್ಜನ್ಯದ ಲೇಪವಿಲ್ಲದಿರುವ ಮತ್ತು ಇದೇ ದೌರ್ಜನ್ಯದ ಅಂಕುರವಾಗಿರುವಂಥ ಮಹಿಳೆ-ತರಳೆಯರನ್ನು ಕ್ರಮದಲ್ಲಿರಿಸಿ, ಸುಶಿಕ್ಷಿತರನ್ನಾಗಿ ಮಾಡಿದರೆ ನಿರ್ದಿಷ್ಟ ಫಲವನ್ನು ಕಾಣಬಹುದು. ಅದು ಕೂಡ ದೇಶೋನ್ನತಿಯಲ್ಲಿಯೇ ಗುರಿಯನ್ನಿರಿಸಿರುವ ಪುರುಷರ ಕರ್ತವ್ಯಕ್ಕೆ ಸೇರಿದ ವಿಚಾರವಾಗಿರುವುದು. ಅವರು ಅದರಲ್ಲಿ ತಮ್ಮ ಸಾಮರ್ಥ್ಯ-ದಕ್ಷತೆಗಳನ್ನೂ ದೇಶಕಾಲಾನು ಗುಣವಾಗಿ ವಿನಿಯೋಗಿಸಿ, ಲೋಕ ಕ್ಷೇಮವನ್ನುಂಟುಮಾಡುವಂತಾಗ ಲೆಂದು ನಿರೀಕ್ಷಿಸುತ್ತಿರುವೆವು.

ಶ್ರೀಃ

# ಉತ್ತರಾರ್ಧ

## I

## ಬಾಂಧವರಲ್ಲಿ ಭಿಕ್ಷೆ.

ಅಬಲಾ ದೌರ್ಜನ್ಯ ನಿರೂಪಣ ಲೇಖನದ ಪೂರ್ವಾರ್ಧದಲ್ಲಿ ಪ್ರಥಮತಃ ಕ್ಷಮಾಪಣವನ್ನು ಕೋರಿ ಆ ಬಳಿಕ—೧. ದೌರ್ಜನ್ಯಕ್ಕೆ ಮೂಲ ಕಾರಣ ಗಳಾದ ಆಲಸ್ಯಾದಿಗಳ ಅಲಂಘ್ಯ ಫಲಗಳು, ೨. ಆತ್ಮೋನ್ನತಿ–ಮಾನಸಿ ಕೋನ್ನತಿಗಳಿಗೆ ಆಧಾರವಾದ ವಿದ್ಯಾಸ್ವರೂಪವನ್ನು ತಿಳಿಯಬೇಕಾದ ಆವಶ್ಯಕತೆ, ೩. ಪ್ರತಿಷ್ಠಾಕಾಮಿಗಳಿಗೆ ಸ್ವಜನರಲ್ಲಿ ಉಂಟಾಗುವ ಈರ್ಷ್ಯಾ ಸೂಯೆಗಳೂ ಮತ್ತು ಅವುಗಳ ಪರಿಣಾಮಗಳೂ, ೪. ಸ್ವಕೀಯರ ಮೇಲುಂಟಾದ ಈರ್ಷ್ಯಾಸೂಯೆಗಳಿಂದಾಗುವ ಪರಿಣಾಮ, ೫. ಸ್ತ್ರೀಯರ ಅವಿದ್ಯೆಗೆ ಪುರುಷರ ಉಪೇಕ್ಷೆಯೇ ಕಾರಣ, ೬. ಅಶಿಕ್ಷೆಯ ಅಲಂಘ್ಯ ಫಲ —ಎಂಬೀ ವಿಷಯಗಳನ್ನು ತಕ್ಕಮಟ್ಟಿಗೆ ಉದಾಹರಣಪೂರ್ವಕವಾಗಿಯೂ ವಿವರವಾಗಿಯೂ ವಿವೇಚಿಸಿರುವುದಷ್ಟೆ? ಇನ್ನು ಅವುಗಳ ಸುಧಾರಣೆಯ ಸಂಬಂಧವಾದ ವಿಷಯಗಳನ್ನು ಈ ಉತ್ತರಾರ್ಧದಲ್ಲಿ ವಿವೇಚಿಸುವುದು ಅಗತ್ಯವಾಗಿರುವುದೆಂದು ಇಲ್ಲಿ ಬೇರೆ ಹೇಳಬೇಕಾದುದಿಲ್ಲ.

ವಿಚಾರಪರರಾದ ಭ್ರಾತೃಗಳೇ! ಅಬಲಾ ಸಮುದಾಯವನ್ನೇ ಸುತ್ತಿ ಮುತ್ತಿ, ಕಾಡುತ್ತಿರುವ ಈ ದೌರ್ಜನ್ಯಾಪವಾದದ ಭೀಕರ ರೋಗಕ್ಕೆ ನಿಮ್ಮವರ ಉಪೇಕ್ಷೆ ಅಶಿಕ್ಷೆಗಳೇ (ಮೂಲ) ಹೇತುವೆಂದೂ, ಅದರಿಂದಾಗುವ ಪರಿಣಾಮವೆಂತಹದೆಂದೂ ಹಿಂದೆ ನಿವೇದಿಸಿರುವುದಲ್ಲದೆ, ಜನ್ಮಸ್ಥಾನವಾಗಿ ಬೀಗಿ ಬಿರಿದುಹೋಗುತ್ತಿರುವ ನಾರಿ(?)ಯರನ್ನು ಇನ್ನು ಸುಧಾರಿಸುವುದು ಅಸಾಧ್ಯವಾದರೂ ಅಂತಹರ ಉಪದೇಶದಿಂದ ಅಭಿಮಾನಪರರಾಗಿ ವಿವೇಕ ವನ್ನು ಕಳೆದುಕೊಳ್ಳುವುದರಲ್ಲಿರುವ ಮಹಿಳೆಯರನ್ನು ಶ್ರಮಪಟ್ಟಾದರೂ ಸುಧಾರಿಸಬೇಕಾದುದೂ ಮತ್ತು ಎಳೆಯರಾಗಿರುವ ಹುಡುಗಿಯರನ್ನು ಯಥಾರ್ಥವಾದ ಜ್ಞಾನದಿಂದ ಪ್ರಕಾಶಿಸುವಂತೆ ಸುಶಿಕ್ಷಿತೆಯರನ್ನಾಗಿ ಮಾಡಬೇಕಾದುದೂ ನಿಮ್ಮವರ ಅವಶ್ಯ ಕರ್ತವ್ಯವೆಂದು ಕೂಡ ಶ್ರುತಪಡಿಸಿ

ರುವುದು. ಆದರೆ ನಿಜಸ್ಥಿತಿಯನ್ನು ಹೇಳುವಾಗ ಕೆಲವೆಡೆಗಳಲ್ಲಿ ಖತಿಯಿಂದ ಒಂದೆರಡು ಕಠಿನ ಶಬ್ದಗಳು ಹೊರಬಿದ್ದಿರಬಹುದಾದುದರಿಂದ ನಿಮ್ಮಲ್ಲಿ ಯಾರಾದರೂ ಕೋಪಿಸಿಕೊಳ್ಳುವರೋ ಹೇಗೋ? ಹಾಗೆ ಕೋಪಿಸುವ ವರೂ ಇದ್ದರೆ ಅಂತಹರಲ್ಲಿ ನಮ್ಮ ಸವಿನಯ ನಿವೇದನವಿಷ್ಟೆ!

"ಬಾಂಧವರೆ, ನಿಮ್ಮ ಪೋಷ್ಯವರ್ಗಕ್ಕೆ, ಆಶ್ರಿತವರ್ಗಕ್ಕೆ—ಶಿಷ್ಯ ಕೋಟಿಗೆ ಸೇರಿದವರಾಗಿ ನಿಮ್ಮ ಪ್ರೀತಿ, ವಿಶ್ವಾಸ, ಗೌರವ, ದಯೆ, ಕನಿಕರ ಗಳಿಗೆ ಪಾತ್ರರಾಗಿ, ನಿಮ್ಮಿಂದಲೇ ಮುಂದೆ ಬರುವವರಾಗಿರುವ ಆ ಮಹಿಳೆ ಯರನ್ನು ಆಕ್ರಮಿಸಿ ನುಂಗುವ ಈ ಭಯಂಕರ ದೌರ್ಜನ್ಯ ರೋಗವನ್ನು ನೀವು ಸರ್ವಪ್ರಯತ್ನದಿಂದಲೂ ನಿವಾರಣೆಮಾಡಿ, ಅವರನ್ನು ಸುಸ್ಥಿತಿಗೆ ತರುವುದು ನಿಮ್ಮ ಕರ್ತವ್ಯಕ್ಕೆ ಸೇರಿದುದಲ್ಲವೆ? ಈ ವಿಚಾರವು ನಿಮ್ಮ ಮನಸ್ಸಿನಲ್ಲಿರಬೇಡವೆ? ಹಾಗೆ ನೀವು ಸ್ತ್ರೀಯರ ಅಭ್ಯುದಯವನ್ನು ಕೋರು ವವರಾಗಿದ್ದರೆ, ಇನ್ನೂ ಹೀಗೇಕೆ ಅಲಸರಾಗಿರುವಿರಿ? ಆದಷ್ಟು ತ್ವರೆಯಿಂದ ಪ್ರಯತ್ನಪರರಾಗಿರಿ. ಬಲಿತುಹೋಗಿರುವುದನ್ನು ಉಪಾಯಾಂತರಗಳಿಂದ, ಬಲವಾದ ಚಿಕಿತ್ಸೆಗಳಿಂದ, ಹತೋಟಿಗೆ ತಂದು ಜಗ್ಗಿಹಿಡಿದು ತಗ್ಗಿಸಿರಿ! ಬಲಿಯುದಿರುವುದನ್ನು ವಿತರಣೆಯಿಂದ ಹದಮಾಡಿಕೊಳ್ಳಿರಿ! ಎಳೆಯದಾಗಿ ರುವುದನ್ನು ಈಗಿನಿಂದಲೇ ನಿಮ್ಮವರ ಮುಂದಿನ ಉನ್ನತಿ ಮಾರ್ಗಕ್ಕೆ ಸಾಧನವಾಗುವಂತೆ ಸರಿಯಾಗಿ ಮಾಡಿಕೊಳ್ಳಿರಿ! ವಿಳಂಬಿಸದೆ ಚಿಕಿತ್ಸೆಗೆ ಪ್ರಾರಂಭಿಸಿರಿ."

ಸುಹೃದರೆ, ನೀವು ಮಾಡಬೇಕಾದ ಚಿಕಿತ್ಸಾಕ್ರಮವು ಹೇಗಿರ ಬೇಕೆಂಬುದನ್ನು ಬಲ್ಲಿರೇ? ವಿಚಾರಮಾಡಿರುವಿರೇ! ಬಾಲ್ಯದಲ್ಲಿಯೇ ಹೆಣ್ಣು ಮಕ್ಕಳ ವಿಷಯವಾಗಿ ವಿಶೇಷ ಲಕ್ಷ್ಯವಿರಿಸಿ ತಂದೆಯಾದವನು, ತಂದೆಯಿಲ್ಲ ದಿದ್ದರೆ, ತಂದೆಗೆ ತಂದೆ, ಕಿರಿಯ ತಂದೆ, ಅಣ್ಣ—ಅನಾಥೆಯರಿಗೆ ಆಶ್ರಯವಿತ್ತ ಪಾಲಕರು ಅಥವಾ ಗುರು—ಇವರು ಆ ಹುಡುಗಿಯರನ್ನು ಆದರದಿಂದ ಕಂಡು, ಪ್ರೀತಿಯ ಸ್ವಭಾವವನ್ನು ಅವರು ತಿಳಿವಂತೆ ನಯರೀತಿಯಿಂದ, ಪ್ರಕೃತಿ ಸ್ವಭಾವವನ್ನೂ ಪರಮಾತ್ಮನ ದಯೆಯನ್ನೂ ಪಾಪ ಪುಣ್ಯಗಳ ಸ್ವರೂಪ ವ್ಯತ್ಯಾಸಗಳನ್ನೂ ಸಂದರ್ಭವೊದಗಿದಂತೆಲ್ಲಾ ಸ್ವಲ್ಪ ಸ್ವಲ್ಪ ವಾಗಿಯೂ ಸುಲಭ ರೀತಿಯಿಂದಲೂ ವಿವರಿಸುತ್ತಬರಬೇಕಲ್ಲದೆ, ಅವರು

ಸತ್ಯ, ಭೂತದಯೆ, ಗುರುದೈವಭಕ್ತಿ, ವಿನಯ ಸಂಪನ್ನತೆ, ಪಾಪಭೀತಿ, ಧರ್ಮಶ್ರದ್ಧೆಗಳೆಂಬ ಷಡ್ಗುಣಗಳನ್ನೂ ಅನುಕ್ರಮವಾಗಿ ಪಡೆದುಕೊಳ್ಳುವಂತೆ ನಮ್ಮ ಪೂರ್ವಜರ ಪವಿತ್ರ ಚರಿತ್ರೆಗಳನ್ನೂ ತಿಳಿಸಿದುದಾದರೆ ನಿರಲಸತೆಯೂ ವಿಚಾರ ವಿಮರ್ಶಾಜ್ಞಾನವೂ ಸತತೋದ್ಯಮಶೀಲತೆಯೂ ನೆಲೆಗೊಂಡು ಅಂತಹರ ಪ್ರಭಾವದಿಂದ ಅವರು ಸತಿಯರ ಧರ್ಮರಹಸ್ಯವನ್ನು —ಎಂದರೆ, ಪತಿ ಸೇವೆಯೇ ಪ್ರಧಾನವಾಗಿರುವ ಗೃಹರಾಜ್ಯಕಾರ್ಯಕ್ಕೊಳಪಟ್ಟ ಗೃಹಿಣೀ ಕರ್ತವ್ಯದ ಸಮಸ್ತ ಭಾರವನ್ನೂ ನಿರ್ವಹಿಸುವಂತಹ ಪ್ರೌಢಶಿಕ್ಷಣವನ್ನು ಅತ್ಯಂತ ಸುಲಭವಾಗಿ ಹೊಂದಬಹುದು.

ಈ ರೀತಿಯಾದ ಚಿಕಿತ್ಸೆಯು ಸದಸದ್ವಿಚಾರಪರವಾಗಿ, ಪರಿಪಕ್ವ ಬುದ್ಧಿಯುಳ್ಳ ಪಂಡಿತರೆನ್ನಿಸಿದ ಅನುಭವಶಾಲಿಗಳಿಂದ ಮಾಡಲ್ಪಟ್ಟರೆ ಆಗುವಷ್ಟು ಫಲವು-ಪ್ರಯೋಜನವು, ಸಿದ್ಧಿಯು, ಸದ್ಯಃಸ್ಥಿತಿಯಲ್ಲಿ ಸ್ತ್ರೀಯರ ಚಿಕಿತ್ಸೆಯಿಂದ ಆಗುವುದೆಂದು ನಿರೀಕ್ಷಿಸುವಂತಿಲ್ಲ. ಕಾಲಗುಣ ವ್ಯತ್ಯಾಸದಿಂದಲೋ ಸಂಸರ್ಗ ದೋಷದಿಂದಲೋ ಅಥವಾ ನಮ್ಮವರ ವೈಯನ್ನುಂಡಿರುವ ಉದಾಸೀನದ ಬಲದಿಂದಲೋ ಹೇಗೇ ಆಗಲಿ,—ನಮ್ಮವರು ಸದ್ಯದಲ್ಲಿ ಈ ಬಗೆಯ ಚಿಕಿತ್ಸಕರಾಗಲು ಶಕ್ತರಾಗಿಲ್ಲವೆಂದು ಬಹು ದುಃಖದಿಂದ ಹೇಳಬೇಕಾಗಿದೆ! ಒಂದುವೇಳೆ, ಸಾವಿರಕ್ಕೆ ಒಬ್ಬಿಬ್ಬರಂತೆ ಚಿಕಿತ್ಸಕರಾಗಲು ಸಮರ್ಥೆಯರಾದ ಮಾನಿನೀಮಣಿಯರು ಇರಬಹುದಾದರೂ ಒಟ್ಟಿನಮೇಲೆ ನೋಡುವುದಾದರೆ ನಮಗೆ ತಿಳಿದುಬರುವುದಿಷ್ಟೆ: ಮೇಲೆ ಹೇಳಿದಂತೆ ಸಮರ್ಥೆಯರು ಒಬ್ಬಿಬ್ಬರು ಮಹಿಳಾಮಣಿಯರು ತಮ್ಮ ವಿಚಾರಕ್ಕೆ ಒಳಪಟ್ಟ ಬಾಲಿಕಾನಿವಹವನ್ನೂ ಮಹಿಳೆಯರನ್ನೂ ಸುಶಿಕ್ಷಿತೆಯರನ್ನಾಗಿ ಮಾಡುವರೆಂದು ಹೇಳಬೇಕಾದ ಅಗತ್ಯವಿಲ್ಲವಾದುದರಿಂದ ಅವರ ವಿಚಾರವನ್ನಿಲ್ಲಿ ತೆಗೆಯುವುದಿಲ್ಲ. ಉಳಿದ ನಮ್ಮ ಸ್ತ್ರೀಯರಲ್ಲಿ—೧. ಅಕ್ಷರಸ್ಥರಲ್ಲದವರು, ೨. ಕಲಿತವರು, ೩. ಸಾಮಾನ್ಯವಾಗಿ ಅಕ್ಷರಜ್ಞಾನನನ್ನು ಪಡೆದವರು ಎಂದು ಮೂರು ಪಂಗಡಗಳನ್ನು ಮಾಡಿ ವಿವೇಚಿಸಿದರೆ, ಮೊದಲನೆಯವರು, ಎಂದರೆ ಅನಕ್ಷರಸ್ಥರು, ಬಹುಶಃ ಆಚಾರಪರರೂ, ಗೃಹಕೃತ್ಯಗಳಲ್ಲಿ ಅವಿಶ್ರಾಂತವಾಗಿ (ಬಿಡುವಿಲ್ಲದೆ) ದುಡಿಯತಕ್ಕವರೂ, ಸ್ವಶರೀರಾಭಿಮಾನವಿಲ್ಲದವರೂ ಆಗಿರುವರು. ಇಂಥವರಲ್ಲಿ—ಮೌಢ್ಯಾ

ಚಾರದೊಡನೆ ಮೂರ್ಖತನ, ಕ್ರೌರ್ಯ, ಕಲಹಕಾರಿತ್ವ, ಪರಶ್ರೇಯೋಽಸಹಿಷ್ಣುತೆ—ಎಂಬೀ ದುರ್ಗುಣಗಳಿಂದ ಕೂಡಿದ ಕಂಟಕಿಯರು ಕೆಲವರಿರ ಬಹುದಾದರೂ ಅವರ ವಿಚಾರವನ್ನು ಹಿಂದೆಯೇ ನಿವೇದಿಸಿರುವುದರಿಂದ ಈಗ ತೆಗೆಯಬೇಕಾಗಿಲ್ಲ. ಇಂಥವರಿಂದ—ಎಂದರೆ ಮೇಲೆ ಹೇಳಿದ ಅಕ್ಷರಸ್ಥರಲ್ಲ ದವರಿಂದ ನಮ್ಮ ಬಾಲಿಕಾನಿವಹವು ಪಡೆಯುವ ಶಿಕ್ಷಣವೆಷ್ಟರ ಮಟ್ಟಿನ ದೆಂದರೆ ತಕ್ಕ ಮಟ್ಟಿಗೆ ಮನೆಗೆಲಸಗಳನ್ನು ಕಷ್ಟಕೋಟಲೆಗಳೆನ್ನದೆ ನಿರ್ವಹಿ ಸುವ ಕ್ರಮವೊಂದು ಮಾತ್ರವೇ! ಇಷ್ಟರಿಂದಲೇ ಎಂದರೆ ದುಡಿವು ದೊಂದು ಬಂದಷ್ಟರಿಂದಲೇ ಸ್ತ್ರೀಯರು ಅವಶ್ಯಕವಾಗಿ ಪಡೆಯಬೇಕಾದ ಶಿಕ್ಷಣವೆಲ್ಲಾ ದೊರೆದವೆಂದಾಗಲೀ, ಅವರಲ್ಲಿ ಅಗತ್ಯವಾಗಿ, ಸತೀನಾಮ ಸಾರ್ಥಕತೆಗೆ ಮುಖ್ಯವಾಗಿರಬೇಕಾದ ಸದ್ಗುಣಗಳೆಲ್ಲವೂ ಉಂಟಾಗಿರುವ ವೆಂದಾಗಲೀ ಹೇಳುವಂತಿಲ್ಲ. ದುಡಿಮೆಗೆ ತಕ್ಕಂತೆ ಬುದ್ಧಿಕುಶಲತೆ, ಸಹನ ಶೀಲತೆ, ನ್ಯಾಯವಿಚಕ್ಷಣತೆಗಳೂ, ಗೃಹಿಣಿಯಾಗುವಳು ತನ್ನ ಪತಿಯ ಮತ್ತು ಗುರುಜನರ ವಿಷಯದಲ್ಲಿ ಹೇಗೆ ವರ್ತಿಸಬೇಕು? ಆಶ್ರಿತರ—ಅನಾಥರ ವಿಷಯಗಳಲ್ಲಿ ಹೇಗೆ ನಡೆಯಬೇಕು—ಎಂಬ ವಿತರಣೆ, ತಾರತಮ್ಯ ಜ್ಞಾನ, ಮರ್ಯಾದೆಗಳೇ ಮೊದಲಾದುವುಗಳೂ ಇದ್ದಹೊರತು, ಅವಳು ಪಕ್ಕಾ 'ಗೃಹಿಣಿ' (ಅನ್ವರ್ಥನಾಮ್ನಿಯೂ ಸಮರ್ಥೆಯೂ ಆದವಳು) ಎಂದಾಗಲೀ ಸುಶಿಕ್ಷಿತ ಸ್ತ್ರೀಯೆಂದಾಗಲೀ ಹೇಳಿಸಿಕೊಳ್ಳಲಾರಳು. ಇಷ್ಟೆ ಲ್ಲವೂ—ಕೇವಲ ಅಂಧಶ್ರದ್ಧೆ—ಮೂಢಭಕ್ತಿಗಳುಳ್ಳ ಅನಕ್ಷರಸ್ಥರಿಂದಲೇ ಲಭಿಸುವುವೆಂದು ಹೇಗೆ ನಿರೀಕ್ಷಿಸಬಹುದು? ಅಲ್ಲದೆ, ಅವರಿಗೆ, ತಾಳ್ಮೆ ಯಿಂದಲೂ ಸಾವಕಾಶವಾಗಿಯೂ ಕಲಿಸುವಷ್ಟು ವೇಳೆಯೂ ಇರುವು ದಿಲ್ಲ. ತಮ್ಮ ಕೆಲಸಗಳನ್ನು ನೋಡಿ ಅದರಂತೆ ಮಾಡುವುದನ್ನು ಕಲಿತು ಕೊಳ್ಳಬೇಕೆಂಬಿಷ್ಟನ್ನೇ ಅವರು ಹೇಳಿಕೊಡಬಲ್ಲರು. ಅದಕ್ಕೂ ಹೆಚ್ಚಾಗಿ ಕಲಿಸಲು ಅವರಿಗೆ ಶಕ್ಯವೂ ಇಲ್ಲ, ಅವಕಾಶವೂ ಇಲ್ಲ.

ಇನ್ನು ಎರಡನೆಯ ಪಂಗಡದವರೆಂದರೆ ಅವರ ಈಗಿನ ವ್ಯಾಸಂಗ ಕ್ರಮವನ್ನೂ, ಆ ವ್ಯಾಸಂಗಕ್ಕೆ ಈವರೆಗೆ ಆಗಿರುವ ಫಲವನ್ನೂ ನೋಡಿದರೆ ನಮ್ಮ ತಲೆಯೇ ತಿರುಗುವಂತಾಗುತ್ತದೆ. ಏಕೆಂದರೆ, ಈಗಿನವರೆಗೆ ಕಲಿ ತವರೆನ್ನಿಸಿದವರೂ ಕಲಿಯುತ್ತಿರುವವರೂ (ಸುಧಾರಣೆಯ ಶಿಖರವನ್ನೇರಿ

ದವರು) ಮಾಡುತ್ತಿರುವ ವ್ಯಾಸಂಗ—ಅಭ್ಯಾಸ—ಆಚರಣ—ವಿಚಾರ ವಿಚಕ್ಷಣ ಗಳನ್ನು ಹೇಗೆ ಹೇಗೆ ನೋಡಿದರೂ ಅವುಗಳಲ್ಲಿ ನಮ್ಮ ಆರ್ಯ ನಾರೀ ಧರ್ಮಕ್ಕೆ ಪುಷ್ಟಿಯನ್ನುಂಟುಮಾಡುವ, ಮಹಿಳಾ ಜನ್ಮ ಸಾಫಲ್ಯಕ್ಕೆ ಸಹಕಾರಿಯಾಗುವ ಶಿಕ್ಷಣ ಭಾಗವೆಳ್ಳಷ್ಟೂ ಕಂಡುಬಾರದೆ, ಅದಕ್ಕೆ ವಿಪರೀತವಾದ ಶಿಕ್ಷಣಗಳೇ ಕಂಡುಬರುತ್ತಿರುವುವು. ಅಂತಿರುವುದರಿಂದ, ನವನಾಗರಿಕರೆನ್ನಿಸಿ ಮೆರೆವರಿಂದ, ನಮ್ಮ ಬಾಲೆಯರಿಗೆ ದೊರೆಯಬಹುದಾದ ಶಿಕ್ಷಣಗಳೆಂದರೆ, ವೇಷಭೂಷಣಗಳಲ್ಲಿ ಆಶೆ, ಸರ್ವತಂತ್ರ ಸ್ವಾತಂತ್ರ್ಯಪರತೆ ಗಳಿಗೆ ಸಹಕಾರಿಗಳಾಗಲು ಎಷ್ಟುಬೇಕೋ ಅಷ್ಟೇ ಶಿಕ್ಷಣವು ದೊರೆಯ ಬಹುದಲ್ಲದೆ, ಪ್ರಕೃತಿ ಸೌಂದರ್ಯಕ್ಕೆ ಒಪ್ಪುವ, ಗೃಹಿಣೀ ಪದವಿಗೆ ಅರ್ಹತೆಯನ್ನುಂಟುಮಾಡುವ ಶಿಕ್ಷಣವು ಅವರಿಗೆ ದೊರೆಯುವುದಿಲ್ಲ. ಎಂದರೆ ವಿಚಾರಜ್ಞಾನ, ವಿನಯಶೀಲತೆಗಳು ಅವರಿಗೆ ಮೇಲ್ಕಂಡವರ ಶಿಕ್ಷಣ ದಿಂದ ಹೇಗೂ ದೊರೆಯಲಾರವು!

ಇನ್ನು ಮೂರನೆ ವರ್ಗಕ್ಕೆ ಸೇರಿದ—ಎಂದರೆ ಸ್ತ್ರೀ ಸಮಾಜದಲ್ಲಿ ಈಗಿನ ಮಟ್ಟಿಗೆ ಉತ್ತಮ ವರ್ಗವೆನ್ನಿಸಿರುವ, ಸಾಮಾನ್ಯವಾದ ಅಕ್ಷರಜ್ಞಾನ ವನ್ನು ಪಡೆದವರೋ ಎಂದರೆ—ಇದ್ದುದರಲ್ಲಿ ಏನಾದರೂ ಗೃಹಶಿಕ್ಷಣ ಮತ್ತು ನೈತಿಕ ಶಿಕ್ಷಣಗಳ ಪಾಠಗಳನ್ನು ಕಲಿಸಬೇಕೆಂದರೆ ಇವರೇ! ಹೇಗೆಂದರೆ, ಕಲಿತವರೆನ್ನಿಸಿದವರಲ್ಲಿರುವ ಅಭಿಮಾನ, ದರ್ಪ, ಶಠತೆಗಳು ಇವರಲ್ಲಿ ಅಷ್ಟು ಉಂಟಾಗುವುದಿಲ್ಲ. ತಾವು ಅಷ್ಟು ಕಲಿತವರಲ್ಲವೆಂದೂ, ತಕ್ಕಮಟ್ಟಿಗೆ ಓದು ಬರೆಹವನ್ನು ಮಾತ್ರ ಕಲಿತವರೇ ಹೊರತು ಪ್ರೌಢ ವಿದ್ಯಾಭ್ಯಾಸಮಾಡಲಿಲ್ಲವೆಂದೂ, ಆದುದರಿಂದ ತಮಗೂ ಹೆಚ್ಚು ಕಲಿತವರು ಬಹುಮಂದಿಯಿರುವರೆಂದೂ ಇವರು ಭಾವಿಸಿರುವುದರಿಂದ, ಇವರಲ್ಲಿ ಮೇಲಿನ ಅಭಿಮಾನಾದಿಗಳಿಗೆ ಅವಕಾಶವಿರುವುದಿಲ್ಲ; ಮತ್ತು ಯಾವು ದಾದರೂ ಹೊಸ ವಿಷಯವನ್ನು ಕೇಳಿದರೆ ಅದನ್ನು ತಿಳಿದುಕೊಳ್ಳಬೇಕೆಂಬ ಉತ್ಸುಕತೆಯೂ ಇವರಿಗಿರುವುದು. ಅಲ್ಲದೆ ತಮ್ಮ ಪಾಲಿನ ಮನೆಯ ಕೆಲಸ ಗಳನ್ನೂ ಅವರು ಉತ್ತರಿಸುವುದಿಲ್ಲ. ಯಥಾಮತಿ ಗೃಹಕಾರ್ಯಗಳನ್ನು ಮಾಡಿಕೊಳ್ಳುತ್ತಲೂ ವಿಚಾರಜ್ಞಾನವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನ ಪಡುತ್ತಲೂ ಇರುವುದರಿಂದ ಇಂಥವರಲ್ಲಿ ಸಾಧಾರಣವಾಗಿ, ಅಷ್ಟೇನೂ

ಅಲಸತೆ, ಉದಾಸೀನತೆಗಳಿರುವುದಿಲ್ಲ. ಇವರಿಂದ ನಮ್ಮ ಬಾಲಿಕಾ ನಿವಹಕ್ಕೆ ಶಿಕ್ಷಣವು ದೊರೆಯುವುದೆಂದರೆ ಸಾಮಾನ್ಯ ಜ್ಞಾನ,—ತಕ್ಕ ಮಟ್ಟಿಗೆ ಗೃಹಕಾರ್ಯ ನಿರ್ವಾಹಮಾಡುವಷ್ಟು ಮಟ್ಟಿನ ಶಿಕ್ಷಣವು ಮಾತ್ರ ದೊರೆಯುವುದು. ಇಷ್ಟು ದೊರೆತರೂ ಸದ್ಯಃಸ್ಥಿತಿಗೆ ಎಷ್ಟೋ ಅನುಕೂಲ! ಆದರೆ, ಈ ವರ್ಗಕ್ಕೆ ಸೇರಿದ ನಮ್ಮ ಸೋದರಿಯರಲ್ಲಿ ಬಹು ಮಂದಿಗೆ ವಿರಾಮವೇ ಇರುವುದಿಲ್ಲ; ಮತ್ತು ಇತರರಿಗೆ ಕಲಿಸಲು ತಕ್ಕಷ್ಟು ಅನುಕೂಲತೆಯೂ ಸ್ವಾತಂತ್ರ್ಯವೂ ದೊರೆಯುವುದಿಲ್ಲ. ಅನೇಕ ವಿಧಗಳಾದ ಅಡಚಣೆಗಳಿದ್ದು ಕೆಲವುವೇಳೆ ಆ ಅಡಚಣೆಗಳಿಂದ ಅವರು ತಾವೇ ಬುದ್ಧಿ ಶೂನ್ಯರಂತಾಗಿ ಕರ್ತವ್ಯತಾ ಮೂಢರಂತೆ ಕುಳಿತುಬಿಡುವ ಪ್ರಸಂಗಗಳೂ ಬರುವುವು. ಇಂಥ ವೇಳೆಗಳಲ್ಲಿ ಅವುಗಳಿಂದ ಪಾರಾಗಿ ಮನಸ್ಸಮಾಧಾನ ಹೊಂದಬೇಕಾದರೆ ಅವರಿಗೆ ಬಲವತ್ಪ್ರಯತ್ನವೂ ಸಹಾಯವೂ ದೊರೆಯ ಬೇಕಾಗುವುದು. ಇನ್ನುಳಿದ ಕೆಲವರಲ್ಲಿ ಬುದ್ಧಿಶಕ್ತಿ, ವಿಚಾರ ಜ್ಞಾನಗಳು ಚೆನ್ನಾಗಿದ್ದರೂ ಸ್ವಭಾವತಃ ಸಂಶಯ, ಭಯ, ಸಂಕೋಚಗಳು ಅವರಲ್ಲಿರು ವುದರಿಂದ ಬಾಲೆಯರಿಗೆ ಶಿಕ್ಷಣವನ್ನು ಕೊಡುವಷ್ಟು ಅರ್ಹತೆಯನ್ನು ಹೊಂದಿರುವುದಿಲ್ಲ.

ಸಾಧಾರಣವಾಗಿ ಬಾಲೆಯರಿಗಾಗಲೀ ಬಾಲಕರಿಗಾಗಲೀ ವಿದ್ಯಾ ಬುದ್ಧಿಗಳನ್ನುಂಟುಮಾಡುವ ಶಿಕ್ಷಕರು ತಮ್ಮ ಸ್ವಭಾವ, ಗುಣ, ನಡೆ, ನುಡಿಗಳು ಹೇಗಿವೆಯೋ ಅವುಗಳಂತೆಯೇ ತಮ್ಮ ಶಿಷ್ಯವರ್ಗಕ್ಕೂ ಕಲಿಸುವರು. ಹೇಗೆಂದರೆ ಶಿಕ್ಷಕರು ಅಲಸಗಾರರಾಗಿದ್ದರೆ ಶಿಷ್ಯರೂ ಅವರನ್ನು ನೋಡಿಯೂ ಅವರ ಸಹವಾಸ ಮಾಡಿಯೂ ಅವರಂತೆಯೇ ಅಲಸರಾಗುವರು. ಅವರು ಕೋಪ, ಕಾಠಿನ್ಯ, ನಿರ್ದಯೆಗಳುಳ್ಳವರಾಗಿದ್ದರೆ ಅವರ ಅಧೀನದಲ್ಲಿರುವ ಶಿಷ್ಯರೂ ಅದೇ ಗುಣವನ್ನೇ ಕಲಿತುಕೊಳ್ಳುವರಲ್ಲದೆ, ಕಪಟ ನಟನೆ, ಅನೃತ, ವಂಚನೆ ಇವುಗಳನ್ನು ಅಭ್ಯಾಸಮಾಡುವರು. ಆದುದರಿಂದಲೇ ಸಿಕ್ಕಿದವರ ಬಳಿಯಲ್ಲಿ ಹುಡುಗರಿಗೆ ಶಿಕ್ಷಣವನ್ನು ಕೊಡಿಸ ಬಾರದೆನ್ನುವರು.

ಪ್ರಾಯಿಕವಾಗಿ ಪ್ರಥಮತಃ ಶಿಕ್ಷಣವನ್ನು ಕೊಡುವವರೆಂದರೆ ಹುಡುಗರ-ಹುಡುಗಿಯರ ತಾಯಿಯರೇ ಎನ್ನಬೇಕು. ಹೇಗೆಂದರೆ,

ಹುಡುಗರಿಗೆ ಬುದ್ಧಿ ತಿಳಿಯುವವರೆಗೆ ವಿಶೇಷವಾಗಿ ಮನೆ ಬಿಟ್ಟು ಬರುವುದಿಲ್ಲ. ಆಗ ಅವರು ತಮ್ಮ ತಾಯಿತಂದೆಯರ ನಡೆನುಡಿಗಳ ಕಡೆಗೇ ವಿಶೇಷ ಲಕ್ಷ್ಯವಿರಿಸಿರುವರು. ನಡೆನುಡಿಯನ್ನು ಕಲಿಯುವ ಕಾಲವು ಅದೇ ಆಗಿರುವುದರಿಂದ ಆ ಕಾಲದಲ್ಲಿ ತಮ್ಮ ಹಿರಿಯರು ಆಡುವ ಮತ್ತು ಮಾಡುವ ಭಾಷಣ ಆಚರಣೆಗಳನ್ನು ನೋಡಿ ತಾವೂ ಅವರಂತೆಯೇ ನಡೆಯಬೇಕೆಂದೆಣಿಸಿ, ಮೆಲ್ಲಮೆಲ್ಲನೆ ಅದನ್ನೇ ಅಭ್ಯಾಸಕ್ಕೆ ತರುತ್ತಾರೆ. ಆ ಕಾಲದಲ್ಲಿ, ಎಂದರೆ ಬಾಲ್ಯದಲ್ಲಿ ಹುಡುಗರ ಮನಸ್ಸಿನಲ್ಲಿ ಯಾವ ವಿಚಾರವು ಬಲವಾಗಿ ಬೇರೂರುವುದೋ ಅದೇ ಅವರು ದೊಡ್ಡವರಾದ ಮೇಲೆಯೂ ಇರುವುದಲ್ಲದೆ, ಸಂದರ್ಭವೊದಗಿದಂತೆಲ್ಲಾ ಅದೇ ಬೆಳೆಯುತ್ತ ಬರುತ್ತದೆ. ವಿಚಾರವು ಒಳ್ಳೆಯದಾಗಿದ್ದರೆ ಅವರು ಬರುತ ಬರುತ ಸದಾಚಾರಿಗಳಾಗಲು ಸಹಕಾರವಾಗುವುದು; ಕೆಟ್ಟುದಾಗಿದ್ದರೆ ಏನಾಗುವುದೆಂದು ಹೇಳುವ ಆವಶ್ಯಕತೆಯೇ ಇರುವುದಿಲ್ಲ. ಮಿಶ್ರ ವಿಚಾರಗಳಿದ್ದರೆ ಅವರ ಆಚರಣಗಳೂ ಗುಣದೋಷಗಳ ಸಮ್ಮಿಶ್ರಣವುಳ್ಳದಾಗುತ್ತವೆ. ದೋಷಕ್ಕೆ ಒಮ್ಮೆ ಆಸ್ಪದವುಂಟಾದರೆ ಅದು ಯಾವ ಯಾವ ಕಾಲಕ್ಕೆ ಹೇಗೆ ತಿರುಗುವುದೋ, ಯಾವ ಯಾವ ರೂಪಾಂತರಗಳನ್ನು ಹೊಂದುವುದೋ ಹೇಳಬರುವಂತಿಲ್ಲ. ಅದಕ್ಕೆಂದೇ ಬಾಲ್ಯ ಶಿಕ್ಷಣವು ಬಹು ಬೆಲೆಬಾಳುವಂತಹದೆಂದೂ ಬಹು ಉತ್ತರವಾದಿತ್ವವುಳ್ಳದೂ ಜಾಗರೂಕತೆಯಿಂದ ನೋಡಿಕೊಳ್ಳತಕ್ಕಂತಹದೆಂದೂ ನಾವು ಅಡಿಗಡಿಗೆ ಹೇಳುತ್ತಿರುವೆವು.

ಇಂತಹ ಜಾಗರೂಕತೆ ಉತ್ತರವಾದಿತ್ವ(ಜವಾಬ್ದಾರಿ)ದ ಕಾರ್ಯಭಾರವನ್ನು ಹೆಂಗಸರ ತಲೆಯಮೇಲೆಯೇ ಹೊರಿಸಿ ತಾವು ತಟಸ್ಥರಾಗಿರುವುದು ಪುರುಷರ ಧರ್ಮಕ್ಕೆ ಕೊರತೆಯನ್ನುಂಟುಮಾಡುವುದೆಂದೂ, ಈ ಭಾರವನ್ನು ಹೊತ್ತು ಸರಿಯಾಗಿ ನಡೆಯುವಂತಹ ಯೋಗ್ಯತೆಯು ನಮ್ಮ ಸ್ತ್ರೀಯರಿಗೆ ಬರಬೇಕಾದರೆ ಇನ್ನು ಕೆಲವುಕಾಲ ಹೋಗಬೇಕೆಂದೂ (ಎಂದರೆ ಕಾಲವು ಸುಮ್ಮನೆ ಕಳೆದುಹೋದಷ್ಟರಿಂದಲೇ ಆಗತಕ್ಕುದಲ್ಲ.) ಪುರುಷರ ವಿಚಾರಣಾ ಶಕ್ತಿ, ಪ್ರಯತ್ನ, ಪ್ರಯಾಸ–ಸಾಹಸಗಳು ಎಷ್ಟೆಷ್ಟು ಜಾಗ್ರತೆಯಾಗಿ ಸ್ತ್ರೀಯರಿಗೆ ಉಂಟುಮಾಡಿದರೆ ಅಷ್ಟಷ್ಟು ಜಾಗ್ರತೆಯಿಂದ ಆ ಯೋಗ್ಯತೆಯುಂಟಾಗುವುದೆಂದೂ, ಅದನ್ನುಂಟುಮಾಡುವವರೆಗೆ

ಪುರುಷರು ತಮ್ಮ ಕರ್ತವ್ಯವನ್ನು ಮಾಡಿದಂತಾಗುವುದಿಲ್ಲವೆಂದೂ ನಮ್ರಭಾವದಿಂದ ನಿವೇದಿಸುವೆವು.

ಈಗ ಸದ್ಯಕ್ಕೆ ನಮ್ಮ ಪುರುಷ ಬಾಂಧವರು ಮಾಡಬೇಕಾಗಿರುವ ಪ್ರಯತ್ನವೆಂತಹದೆಂದರೆ ಮುಖ್ಯವಾಗಿ ಬಾಲಿಕಾ ಶಿಕ್ಷಣ ವಿಚಾರದಲ್ಲಿ ಅವರು ತೆಗೆದುಕೊಳ್ಳತಕ್ಕ ಭಾಗವೆಷ್ಟೆಂದರೆ ಇಷ್ಟು ಹೇಳತಕ್ಕುದಿದೆ:— "ಬಾಲೆಯರ ನಡೆ ನುಡಿಗಳು ಯಾವ ದಾರಿಯಲ್ಲಿ ತಿರುಗುವಂತಿವೆ, ಅವರ ಗುಣಗಳು ಹೇಗಿವೆ—ಎಂಬಿವನ್ನು ಸೂಕ್ಷ್ಮವಾಗಿ ವಿಚಾರಮಾಡಿ ತಿಳಿಯು ಬೇಕು. ಮನೆಯಲ್ಲಿ ಅವರಿಗೆ ಹಿರಿಯರಿಂದ ಯಾವತರದ ಪಾಠವು ಕಲಿಸಲ್ಪಡುವುದು ಎಂಬಿವನ್ನೂ ಗ್ರಹಿಸಿಕೊಳ್ಳಬೇಕು. ಅವರು ಕೇವಲ ಆಟ ಪಾಟಗಳಲ್ಲಿಯೂ, ಅಲಂಕಾರ ಆಡಂಬರಗಳಲ್ಲಿಯೂ ಕಾಲಕಳೆಯುವಂತಿದ್ದರೆ ಹಿರಿಯರ ಮಾತಿಗೆ ಕಿವಿಗುಡದೆ ಹೇಳಿದ ಮಾತಿಗೆ ಇದಿರಾಡುವ ಮತ್ತು ಚಂಡಿತನದಿಂದ ಹೋರಾಡುವಹಾಗಿದ್ದರೆ ಸರ್ವಪ್ರಯತ್ನದಿಂದಲೂ ಆ ದುರ್ಗುಣಗಳನ್ನು ಬಿಡಿಸಬೇಕು. ಇಲ್ಲದಿದ್ದರೆ ಅವರು ಮುಂದೆ ಸುಸ್ಥಿತಿಗೆ ಬರುವುದು ಕಠಿನವಾಗುವುದು. ಎಂದರೆ ಹೆಣ್ಣುಮಕ್ಕಳ ಶಿಕ್ಷಣ ರಕ್ಷಣ ವಿಚಾರಗಳೆಲ್ಲವೂ ಸ್ತ್ರೀಯರಿಗೇ ಸೇರಿದುವೆಂದೂ, ತಮಗೆ ಗಂಡುಮಕ್ಕಳ ಶಿಕ್ಷಣವೊಂದೇ ಸಾಕಾಗಿರುವದೆಂದೂ ಕೆಲವರು ಹೇಳುವರು. ಮತ್ತೆ ಕೆಲವರು, 'ಅತ್ತೆಯ ಮನೆಗೆ ಹೋದಾಗ ಅಲ್ಲಿ ಅವರಿಗೆ ಶಿಕ್ಷಣವು ತಾನೇ ದೊರೆಯುವುದು, ಅವರೆಗೆ ಇಲ್ಲಿ ಆಡಿಕೊಂಡು ಬೆಳೆಯುತ್ತಿರಲಿ, ಪಾಪ, ಸ್ವಲ್ಪಾವಧಿಯೊಳಗೇ ಅತ್ತೆಯ ಮನೆಗೆ ಹೊರಟುಹೋಗುವರಾಗಿರುವ ಹುಡುಗಿಯರನ್ನು ನಾವೂ ಇಲ್ಲಿ ಪಾಡುಪಡಿಸುವುದೇಕೆ?' ಎಂದೂ ಹೇಳುವರು. ಇನ್ನು ಕೆಲವರು, 'ಹೆಣ್ಣುಮಕ್ಕಳಿಗೆ ಶಿಕ್ಷಣಕೊಡಬೇಕಾದ ಆವಶ್ಯಕತೆಯಿಲ್ಲ, ನಮಗೆ ಉತ್ತರವಾದಿಗಳಾಗುವ ಹುಡುಗರ ಶಿಕ್ಷಣವು ಮಾತ್ರ ಅವಶ್ಯ ಕರ್ತವ್ಯವು' ಎಂದು ಕೂಡ ಹೇಳುತ್ತಿರುವರು. ಈ ಮೂರು ತರದ ಅಭಿಪ್ರಾಯವೂ ಸರಿಯಲ್ಲವೆಂದು ಹೇಳಬೇಕಾಗಿದೆ. ಏಕೆಂದರೆ ಹೆಣ್ಣುಮಕ್ಕಳ ಶಿಕ್ಷಣವು ಹೆಂಗಸರ ಪಾಲಿಗೇ ಸೇರಿದುದೆಂದು ಬಿಟ್ಟರೆ, ಅವರ ಶಿಕ್ಷಣವು ಪೂರ್ಣವಾಗುವುದಿಲ್ಲ. ಗೃಹಕಾರ್ಯ ನಿರ್ವಾಹ, ವಿನಯ ಗಾಂಭೀರ್ಯ ಇವುಗಳು ತಕ್ಕಮಟ್ಟಿಗೆ ಇವರ ಅಭ್ಯಾಸಕ್ಕೆ ಬರ

ಒಹುದು; ಉಳಿದ ಸಾರಾಸಾರ ವಿಚಾರ, ಆತ್ಮಬೋಧ, ಭಗವತ್ಸ್ವರೂಪ ಜ್ಞಾನ, ಸ್ವಕರ್ತವ್ಯ ಜ್ಞಾನ, ಪಾಪಪುಣ್ಯಗಳ ಸ್ಥೂಲ ಸೂಕ್ಷ್ಮ ರಹಸ್ಯ ತತ್ವಗಳ ಗ್ರಹಣಶಕ್ತಿ—ಇಷ್ಟು ಅವರಿಗೆ ಉಂಟಾಗಬೇಕೆಂದರೆ ಅದು ಪರಿಪಕ್ವಬುದ್ಧಿಯುಳ್ಳ ಪುರುಷರ ಹಿತೋಪದೇಶದಿಂದಲೇ ಲಭಿಸಬೇಕು. ಗಂಡುಮಕ್ಕಳಿಗೆ ಶಿಕ್ಷಣವನ್ನು ಕೊಡುವುದೇ ಸಾಕಾಗಿರುವುದೆಂದು ಹೆಣ್ಣು ಮಕ್ಕಳ ವಿಚಾರಣೆಯನ್ನು ಬಿಟ್ಟು ಕುಳಿತರೆ ಕರ್ತವ್ಯಕ್ಕೆ ಲೋಪವನ್ನು ತಂದುಕೊಂಡಂತಾಗುವುದು ಹಾಗಿರಲಿ, ಆ ಹೆಣ್ಣುಮಕ್ಕಳ ಮುಂದಿನ ಅಭ್ಯುದಯಕ್ಕೆ ತಾವೇ ವಿಘಾತಕರಾದಂಥ ವಂಚಕರೆನಿಸುವರು. 'ಹೆಣ್ಣು ಮಕ್ಕಳು ಜಾಗ್ರತೆಯಾಗಿ ಅತ್ತೆಯ ಮನೆಗೆ ಹೋಗುವರು, ಅಲ್ಲಿ ಅವರು ಕಷ್ಟಪಡುವುದು ಇದ್ದೇ ಇದೆ. ಇಲ್ಲಿರುವವರೆಗಾದರೂ ಆಡಿಕೊಂಡಿರಲಿ' ಹೀಗೆಂದು ಅವರನ್ನು ಅತಿಯಾಗಿ ಮುದ್ದಿಸಿ ಮನಬಂದಂತೆ ಆಡಲು ಬಿಟ್ಟರೆ, ನಯ ಭಯಗಳೇನೊಂದನ್ನೂ ತಿಳಿಯದೆ ಕಷ್ಟ-ಕ್ಲೇಶ, ಸುಖ-ಸಂತೋಷಗಳ ಸ್ವಭಾವ, ತಾರತಮ್ಯ, ರೀತಿ, ವಿಧಾನಗಳೇನನ್ನೂ ಅರಿಯದೆ ಕೊಬ್ಬಿದ ಕುದುರೆಗಳಂತೆ ಬೆಳೆದ ಆ ಹುಡುಗಿಯರು, ಅತ್ತೆಯ ಮನೆಗೆ ಹೋದ ಕೂಡಲೇ ಅಲ್ಲಿ ತಮ್ಮ ತಲೆಯಮೇಲೆ ಬೀಳುವ ಮನೆಗೆಲಸಗಳ ಹೊರೆಯನ್ನು ಅವರು ತಾಳುವ ಬಗೆ ಹೇಗೆ? ಹೊರೆಯನ್ನು ಯಾವ ಯಾವ ಕಾಲಕ್ಕೆ ಹೇಗೆ ಹೇಗೆ ಎಲ್ಲೆಲ್ಲಿ ಇಳಿಸಿ ಸರಿಪಡಿಸಬೇಕೆಂಬ ವಿವೇಚನೆಯು ಅವರಿಗೆ ಹೇಗೆ ಉಂಟಾಗಬೇಕು. ಹೊರೆಯನ್ನು ಹೊತ್ತಾಗ ಉಂಟಾಗುವ ಪ್ರಯಾಸ ಕ್ಲೇಶಗಳನ್ನು ಸಹಿಸುವ ಸಾಮರ್ಥ್ಯವಾದರೂ ಅವರಿಗೆ ಹೇಗೆ ಬರಬೇಕು? ಅಲ್ಲಿ ಅವರೇನು ಮಾಡಬಹುದು? 'ನಾವು ತವರ್ಮನೆಯಲ್ಲಿ ಹೀಗೆ ಬೆಳೆದೆವು, ಹಾಗೆ ಕುಣಿದಾಡುತ್ತಿದ್ದೆವು; ಒಂದುದಿನವಾದರೂ ನಾವಿಂತಹ ಕೆಲಸಗಳನ್ನು ಮಾಡಿದವರಲ್ಲ' ಎಂದು ತವರ್ಮನೆಯ ಹೆಚ್ಚಿಗೆಯನ್ನು ಹೇಳಿಕೊಳ್ಳುವುದು, ಅತ್ತೆಯ ಮನೆಯವರಮೇಲೆ ದೋಷಗಳನ್ನು ಆರೋಪಿಸಿ, ದೂಷಿಸಿ, ಮನಬಂದಂತೆ ಬಯ್ದು, ಅತ್ತು, ಉಬ್ಬಸಪಟ್ಟು ಕ್ಲೇಶಪಡುವುದೂ, ಹೀಗಲ್ಲವೆ ಅವರು ಮಾಡಬೇಕಾಗುವುದು? ಆದರಲ್ಲಿಯೂ ಅತ್ತೆಯ ಮನೆಯವರು ಬಡತನದಲ್ಲಿದ್ದರಂತೂ ಇವರ ದಾಂಧಳೆಯನ್ನು ಅವರು ತಡೆಯುವ ಹಾಗೆಯೇ ಇಲ್ಲ. ಹಾಗಲ್ಲದೆ ಅತ್ತೆಯ ಮನೆಯವರು ಇಂತಹ

ಒರಟುತನ, ದುರಭಿಮಾನ ಮೊದಲಾದ ದುರ್ಗುಣಗಳನ್ನು ಸಹಿಸದೆ ಮೈಮುರಿದು ಕೆಲಸಮಾಡುವ ನಿಯಮವುಳ್ಳವರಾಗಿದ್ದರೆ, ಅವರು ಸೊಸೆಯರಿಗೆ ಮಾಡುವ ಶಾಸನಗಳನ್ನೂ ನಿಷ್ಠುರಗಳನ್ನೂ ಕೇಳಿದಾಗಲೆಲ್ಲಾ ಇವರಿಗಾಗುವ ಕೋಪ ತಾಪಗಳನ್ನು ವಿವರಿಸುವುದಕ್ಕಾದರೂ ಆದೀತೆ?

ಇಂತಹ ಸ್ತ್ರೀಯರ ಕೈಹಿಡಿದವರಿಗಾಗಲಿ ಮನೆಗೆ ತಂದವರಿಗಾಗಲಿ ಯಾವತರದ ಸುಖ ಸಂತೋಷಗಳುಂಟಾಗಬಹುದು? ಪಾಪ ಪುಣ್ಯಗಳ ಜ್ಞಾನವೂ ಸ್ವಕರ್ತವ್ಯ ಸ್ವಧರ್ಮ ಧ್ಯೇಯಗಳ ವಿವೇಕವೂ ಇಲ್ಲದೆ ದುರಭಿಮಾನಾಂಧತೆಯಿಂದಾವರಿಸಲ್ಪಟ್ಟು, ಪ್ರೇಮ, ಆದರ, ವಿಶ್ವಾಸಗಳ ಕೋಮಲತೆಯನ್ನೇ ಕಾಣದ ಮೂರ್ಖ ಸ್ವಭಾವದ ಕಠಿನಹೃದಯರಾದ ಹೆಂಗಸರ ಕೈಹಿಡಿದವರಿಗೆ ಪುರುಷಾರ್ಥ ಸಾಧನಗಳ ಆನಂದಾನುಭವಕ್ಕೆ ಅವಕಾಶವೆಲ್ಲಿಯದು? ತಮ್ಮ ಧರ್ಮ ಕರ್ಮಗಳಿಗೆ ಸಹಚಾರಿಣಿಯರಾಗಿದ್ದು, ಸಮಾಜ, ಧರ್ಮ ಉದ್ದೇಶಗಳನ್ನು ಸಫಲಗೊಳಿಸಲು ಬೇಕಾಗುವ ಸಾಧನಗಳನ್ನು ಕಲ್ಪಿಸಿಕೊಡುವರೆಂದು ಆಶೆಯಿಂದ ವಿವಾಹಿತರಾಗುವ ಪುರುಷರಿಗೆ ನಿರೀಕ್ಷಾ ಭಂಗವಾದರೆ ಏನಾಗಬಹುದೆಂಬುದನ್ನು ಪ್ರತಿನಿತ್ಯವೂ ಅನುಭವಿಸುತ್ತಿರುವ ಪುರುಷ ಬಾಂಧವರೇ ಹೇಳಬೇಕಾಗಿದೆ. ಒಂದುವೇಳೆ, ಅವರು—ಎಂದರೆ ಅನುಭವಿಸುತ್ತಿರುವ ಪುರುಷರು ಕೇವಲ ಕ್ಷಮಾಗುಣದಿಂದ ಅದನ್ನು ಸಹಿಸಿಕೊಂಡಿರಬಹುದಾದರೂ ಇತರರಿಂದ ಅದನ್ನು ನೋಡಿ ಸುಮ್ಮನಿರಲಾಗುವುದಿಲ್ಲ. ಇಷ್ಟಾದರೂ ಆ ಅಭಿಮಾನವತಿಯರಾದ ಹೆಂಗಸರು ತಾವಾದರೂ ಮನಸ್ಸಮಾಧಾನದಿಂದಿರುವರೋ ಎಂದರೆ ಸ್ವಪ್ನದಲ್ಲಿ ಕೂಡ ಅವರ ಮನಸ್ಸು ಸಮಸ್ಥಿತಿಯಲ್ಲಿರಲಾರದು. ಹೀಗಾಗಲು ಕಾರಣರಾರು? ಅವರನ್ನು ಪ್ರಾಪಂಚಿಕ ತತ್ವಗಳ ಕಡೆಗೆ ತಿರುಗಿ ನೋಡುವಂತೆ ಮಾಡದೆ ಅಜ್ಞಾನವನ್ನೇ ಬೆಳಸಿದಂಥ ಹಿರಿಯರೇ ಅಹುದಲ್ಲವೇ?

ಇನ್ನು, 'ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ಕೊಡಬೇಕಾದ ಅಗತ್ಯವಿಲ್ಲ; ಉತ್ತರವಾದಿಗಳಾಗುವ ಗಂಡುಮಕ್ಕಳಿಗೆ ಶಿಕ್ಷಣವನ್ನು ಕೊಡಬೇಕಾದುದು ಅಗತ್ಯವು' ಎಂದು ಹೇಳುವವರಿಗೆ ನಾವು ನಿವೇದಿಸುವದೇನು? ಕೇವಲ ಸ್ವಾರ್ಥದೃಷ್ಟಿಯಿಂದ ಇವರು ನಮ್ಮ ನಿವೇದನದ ಕಡೆಗೆ ಕಿವಿಯನ್ನಾದರೂ ಕೊಡುವರೋ ಇಲ್ಲವೋ ತಿಳಿಯೆವು. ಆದರೂ ಅದನ್ನು

ಹೇಳದೆ ಬಿಡುವುದು ನಮ್ಮ ಕೆಲಸವಲ್ಲವಾದುದರಿಂದ ಲಕ್ಷ್ಯಕೊಡಿರೆಂದು ಮತ್ತೊಮ್ಮೆ ಪ್ರಾರ್ಥಿಸಿ ನಿವೇದಿಸುವೆವು. ಗಂಡುಹುಡುಗರಿಗೆ ಮಾತ್ರ ಶಿಕ್ಷಣಕೊಡಬೇಕಾದರೆ, ಪಕ್ಷಪಾತಮಾಡಿದ ದೋಷ, ಅವರು ಸುಶಿಕ್ಷಿತ ರಾಗುವುದರಿಂದ ಮುಂದೆ ತಮಗೆ ಪೋಷಕರೂ ಉತ್ತರಾಧಿಕಾರಿಗಳೂ ಆಗುವರೆಂಬ ಆಶೆ—ಇವೆರಡಕ್ಕೆ ಈಡಾಗಬೇಕಾಗುವುದು. "ಸುಶಿಕ್ಷಿತೆಯು ರಾದ ಹೆಣ್ಣುಹುಡುಗಿಯರಿಂದ ಹುಟ್ಟಿದ ಮನೆಗೂ ಹೊಕ್ಕ ಮನೆಗೂ ಕೀರ್ತಿಯುಂಟಾಗುವುದಲ್ಲದೆ ಸುವಿನೀತೆಯಾದ ಸುತೆಯಿಂದ ಉಭಯ ಕುಲಗಳೂ **ಉದ್ಧಾರವಾಗುವುವೆಂದೂ,** ಅಂಥವರಿಂದ ಸಮಾಜವೂ ಧರ್ಮವೂ ದೇಶವೂ ಏಳಿಗೆಗೆ ಬರುವುವೆಂದೂ" ಪ್ರಾಜ್ಞರು ಹೇಳುವರು. ಅದಕ್ಕೆ ದೃಷ್ಟಾಂತವಾಗಿ ಸಾವಿರಕ್ಕೆ ಒಬ್ಬಿಬ್ಬರಂತೆ ಪ್ರಕಾಶಿಸುತ್ತಿರುವ ನಮ್ಮ ಆರ್ಯಮಹಿಳೆಯರ ಸದ್ವರ್ತನಗಳಿಂದ ಎಷ್ಟು ಲೋಕೋಪಕೃತಿ ಯಾಗುತ್ತಿರುವುದೆಂಬುದನ್ನು ನಾವಿಲ್ಲಿ ಹೇಳಬೇಕಾಗಿಲ್ಲ. ಹಾಗೆ ಅವರು ಸುಶಿಕ್ಷಿತೆಯರಾಗಿ ಅಭ್ಯುದಯವನ್ನು ಹೊಂದಿದಾಗ ಹೆತ್ತವರಿಗಾಗುವ ಆನಂದವನ್ನು ಸ್ಮರಣೆಗೆ ತಂದರೆ ಎಷ್ಟು ಸುಖಕರವಾಗಿ ಕಾಣುವುದು? ಅಂಥವರನ್ನು ಸೊಸೆಯಾಗಿ ಪಡೆದ ಅತ್ತೆಯ ಮನೆಯವರಿಗೆ ಅವರಿಂದಾಗುವ ಸುಖ-ಸಂತೋಷಗಳನ್ನು ಕುರಿತು ಅದಕ್ಕೆ ಕಾರಣಭೂತರಾದ ಆ ವಧುವಿನ ತಾಯ್ತಂದೆಯರ ಅವ್ಯಾಜ ವಾತ್ಸಲ್ಯ—ಧಾರ್ಮಿಕ ವಿಚಾರಗಳಿಗಾಗಿ ಎಷ್ಟು ಕೃತಜ್ಞರಾಗಿರಬಹುದು? ಅಷ್ಟೇ ಅಲ್ಲ, ಅಂಥ ನಾರೀಮಣಿಯ ರಿಂದಾಗುವ ಲೋಕಹಿತ ಕಾರ್ಯಗಳ ಪುಣ್ಯಾಂಶವು ಅವರನ್ನು ಸುಶಿಕ್ಷಿತೆಯ ರನ್ನಾಗಿ ಮಾಡಿದ ತಾಯ್ತಂದೆಯರಿಗೂ ಲಭಿಸದೆ ಹೋಗುವುದಿಲ್ಲ! ಆದುದರಿಂದಲೇ **"ಪುತ್ರಾಚ್ಛತಗುಣಾ ಪುತ್ರೀ"** ಎಂಬ ಶ್ರುತಿಯುಂಟಾ ಗಿರುವುದು. ಹಾಗಲ್ಲದೆ, ಅವರನ್ನು ಅಶಿಕ್ಷಿತೆಯರಾಗಿ ಮಾಡಿಬಿಟ್ಟರೆ ಹಿರಿಯರು ತೋರಿಸುವ ಪಕ್ಷಪಾತವನ್ನು ನೋಡಿ ಅಜ್ಞಾನಾಭಿಮಾನಾಂಧತೆ ಯಿಂದ ಒಡಹುಟ್ಟಿದವರಲ್ಲಿ ಅಸೂಯೆಯುಳ್ಳವರಾಗಿಯೂ, ಹಿರಿಯರಲ್ಲಿ ಅತೃಪ್ತರಾಗಿಯೂ, ದುರಾಗ್ರಹ, ಹಟ, ಕಾಪಟ್ಯ, ವಂಚನೆ, ದೋಷಾ ರೋಪಣೆ, ಮನಸ್ತಾಪಗಳನ್ನು ಹೊಂದುವರಾಗಿಯೂ, ಅದರಿಂದ ತಾವು ಸಂಕಟಪಡುವುದಲ್ಲದೆ, ಹಿರಿಯರನ್ನೂ ತಮಗೆ ಸೇರಿದವರನ್ನೂ ಸಂಕಟ

ಪಡಿಸುವರಾಗುವರು. ಎಂದರೆ, ಮೇಲೆ ಹೇಳಿದಂತೆ ಕೇವಲ ಲಾಲನೆ ಯಿಂದಲೇ ಬೆಳೆದ ಹೆಣ್ಣುಮಕ್ಕಳ ದೆಸೆಯಿಂದಾಗುವ ಹಾನಿಗಳಿಗೂ ಇಮ್ಮಡಿಯಾದ ನಷ್ಟ ನಿಷ್ಠುರಗಳನ್ನುಂಟುಮಾಡುವರು. ಆದರೆ, ಗಂಡು ಮಕ್ಕಳಿಗೆ ಶಿಕ್ಷಣವನ್ನು ಕೊಡುವ ವಿಷಯದಲ್ಲಿ ಅಸಹನೆಯಿಂದ ಈ ಮಾತನ್ನು ಹೇಳುವೆವೆಂದು ಮಾತ್ರ ನಮ್ಮ ಬಾಂಧವರು ಭಾವಿಸಬಾರದು! ಅವರಿಗೆ ಅವಶ್ಯಕವಾಗಿಯೂ ಸುಶಿಕ್ಷಣವನ್ನು ಕೊಡಲೇ ಬೇಕು ; ಮತ್ತು ಉತ್ತಮ ಪ್ರಜಾವೃದ್ಧಿ, ಧರ್ಮಾಭಿವೃದ್ಧಿ, ಕ್ಷೇಮಾಭ್ಯುದಯ, ಸಂಪದಭಿ ವೃದ್ಧಿಗಳೆಂಬ ಪ್ರಾಮುಖ್ಯ ಕಾರ್ಯಗಳೆಲ್ಲಕ್ಕೂ ಮುಖ್ಯ ಸಾಧನ ಪಾತ್ರರಾಗ ಬೇಕಾಗುವ ಹೆಂಗಸರ ಶಿಕ್ಷಣ ವಿಚಾರದಲ್ಲಿ ಅದಕ್ಕೂ ಎಂದರೆ ಗಂಡಸರಿಗೆ ಕೊಡುವ ಶಿಕ್ಷಣಕ್ಕೂ ಅಧಿಕವಾದ ಜಾಗರೂಕತೆಯಿಂದ ಮನಸ್ಸು ಕೊಡ ಬೇಕೆಂಬುದಿಷ್ಟೇ ನಮ್ಮ ನಮ್ರ ಪ್ರಾರ್ಥನೆ!

ಆದುದರಿಂದ, ವಿಶ್ವಸನೀಯರಾದ ಬಾಂಧವರೇ! ದಯೆಯಿಂದ, ನಿಮ್ಮ ಪೋಷ್ಯವರ್ಗಕ್ಕೆ ಸೇರಿದ ಬಾಲೆಯರ ಸುಶಿಕ್ಷಣದ ಕಡೆಗೆ ಲಕ್ಷ್ಯ ಕೊಡಿರಿ? ಅವರಿಗೆ ಪ್ರತಿನಿತ್ಯದಲ್ಲಿ ಭಗವದ್ಭಕ್ತಿಯನ್ನುಂಟುಮಾಡುವಂತೆ ಸ್ತೋತ್ರಪಾಠವನ್ನು ಅರ್ಥಸಹಿತವಾಗಿ ಕಲಿಸಿರಿ; ಅವರ ದಿನಚರಿಯನ್ನು ಕುರಿತು ಪ್ರತಿನಿತ್ಯವೂ ಪ್ರಶ್ನೆಮಾಡಿರಿ, ಅದರಲ್ಲಿ ದೋಷ–ಲೋಪಗಳಿದ್ದರೆ ಅದನ್ನು ಅವರಿಗೆ ತಿಳಿಸಿ ಮುಂದೆ ಅವರು ಹಾಗೆ ಮಾಡದಂತೆ ಎಚ್ಚರಿಸಿರಿ. ಸುಳ್ಳು, ಕಳ್ಳತನ, ಚಂಡಿತನ, ಹೋರಾಟಗಳಿಂದ ಕೂಡಿದವರಿಗೆ ಒಂದೊಂದು ಕೆಟ್ಟ ಗುಣದಿಂದಲೂ ಆಗುವ ಅಪಾಯಗಳನ್ನೂ ಪಾಪಪುಣ್ಯವಿಷಯಕ ವಾದ ತಿಳಿವಳಿಕೆಯನ್ನೂ ಅವಕಾಶವಾದಂತೆ ಸ್ವಲ್ಪ ಸ್ವಲ್ಪವಾಗಿಯೂ ಸುಲಭಗ್ರಾಹ್ಯವಾಗುವಂತೆಯೂ ಬೋಧಿಸಿರಿ. ಅವರಲ್ಲಿ ಒಳ್ಳೆಯ ನಡತೆ ಯನ್ನು ಕಂಡರೆ ಅದಕ್ಕಾಗಿ ನಿಮ್ಮ ಸಂತೋಷವನ್ನು ಪ್ರದರ್ಶಿಸಿರಿ. ಸದ್ವರ್ತನದಿಂದಾಗುವ ಸುಖ ಸಂಪಲ್ಲಾಭಗಳನ್ನು ಉದಾಹರಣಪೂರ್ವಕ ವಾಗಿ ವಿವರಿಸಿ ಅದರಲ್ಲಿ ಅವರಿಗೆ ವಿಶೇಷ ಆದರವುಂಟಾಗಿ, ಅವರು ಮತ್ತೂ ಉತ್ತಮ ಸ್ಥಿತಿಗೆ ಬರುವಂತೆ ಉತ್ತಮ ಸ್ತ್ರೀಯರ ಲಕ್ಷಣ, ಸಾಧ್ವೀವರ್ತನದ ನಿಯಮ, ಸತೀಧರ್ಮದ ಸೂಕ್ಷ್ಮ (ರಹಸ್ಯ) ತತ್ವ, ಸ್ತ್ರೀಕರ್ತವ್ಯ— ಮತ್ತು ಧ್ಯೇಯ ಇವುಗಳನ್ನು ಬೋಧಿಸಿರಿ. ಹೀಗೆ ಉಪದೇಶಮಾಡುವಾಗ

ನೀವು ನಿಮ್ಮ ಪತ್ನಿಯ ಸಮಕ್ಷದಲ್ಲಿ ಮಾಡಿದರೆ ಅದರಿಂದ ನಿಮಗೆ ದ್ವಿಗುಣವಾದ ಲಾಭವುಂಟಾಗುವುದು. ಎಂದರೆ ನಿಮ್ಮ ಪತ್ನಿಯರಲ್ಲಿ ಏನಾದರೂ ವೃಥಾಭಿಮಾನ, ಶಠತೆ, ಹಟಗಳಿದ್ದರೂ, ನೀವು ನಿಮ್ಮ ಬಾಲೆಯರಿಗೆ ಮಾಡುವ ಉಪದೇಶದಿಂದ ಅವರಿಗೂ ತಮ್ಮ ದೋಷಗಳನ್ನು ತಿದ್ದಿಕೊಳ್ಳಬೇಕೆಂಬ ವಿವೇಕವೂ, ತಾವು ಮಾಡಿದ–ಮಾಡುತ್ತಿರುವ ತಪ್ಪುಗಳಿಗಾಗಿ ಪಶ್ಚಾತ್ತಾಪ ಬುದ್ಧಿಯೂ ಉಂಟಾಗಿ, ತಮ್ಮ ನಡೆ ನುಡಿಗಳನ್ನು ತಕ್ಕಮಟ್ಟಿಗೆ ಸುಧಾರಿಸಿಕೊಳ್ಳುವುದಕ್ಕೂ ಅವಕಾಶವಾಗುವದು. ಇದನ್ನು ಮಾಡುವಾಗಲೆಲ್ಲಾ ಆ ನಮ್ಮ ಧರ್ಮಬಾಂಧವರು ತಮ್ಮವರ ಉಪೇಕ್ಷೆಯಿಂದಲೇ ಅವನತಸ್ಥಿತಿಗೆ ಬಂದಿರುವ ಸ್ತ್ರೀಯರನ್ನು ತಾವು ಸರ್ವಪ್ರಯತ್ನದಿಂದಲೂ ಉನ್ನತ ಸ್ಥಿತಿಗೆ ತರುವಂತೆ ಮಾಡದಿರುವುದು ದೋಷವೆಂದೂ, ಅದನ್ನು ಮಾಡುವುದು ಅವಶ್ಯ ಕರ್ತವ್ಯವೆಂದೂ ಗಟ್ಟಿಯಾಗಿ ತಿಳಿದು, ಮನಸ್ಸಾಕ್ಷಿಯಾಗಿ ಮಾಡಬೇಕೆಂದು ಆ ನಮ್ಮ ವಿಶ್ವಸನೀಯರಾದ ಭ್ರಾತೃಗಳೆಲ್ಲರಲ್ಲಿಯೂ ಸಂಪ್ರಾರ್ಥಿಸುವೆವು.

---

## II

## ಅಂಗನೆಯರ ಅವಶ್ಯ ಕರ್ತವ್ಯ.

ಅಬಲಾ ಸಾಮಾನ್ಯವನ್ನೇ ನುಂಗುತ್ತಿರುವ ಈ ದೌರ್ಜನ್ಯಾಪವಾದದ ಭಯಂಕರ ರೋಗವನ್ನು ನಿವಾರಿಸಲು ಪುರುಷರು ಮುಖ್ಯ ಚಿಕಿತ್ಸಕರಾಗಿ ನಿಲ್ಲಬೇಕಾದುದು ಅವಶ್ಯಕವೆಂದು ಈವರೆಗೆ ನಿವೇದಿಸಲಾಯಿತು ; ಇನ್ನು ಹಾಗೆ ಚಿಕಿತ್ಸಕರಾಗಿ ನಿಲ್ಲುವ ಪುರುಷರಿಗೆ ಸ್ತ್ರೀಯರು ಎಷ್ಟೆಷ್ಟು ಮಟ್ಟಿಗೆ ಸಹಾಯಮಾಡಬೇಕಾದುದು ಧರ್ಮವೆಂಬುದನ್ನು ಇಲ್ಲಿ ಹೇಳಬೇಕಾಗಿದೆ. ಎಂದರೆ, ನಮ್ಮ ಸೋದರಿಯರಲ್ಲಿ ಅಭಿಮಾನವತಿಯರಾದವರು ನಮ್ಮ ಮೇಲೆ ಸಿಟ್ಟಾಗಬಹುದು ; ತಮಗಾರಿಗೂ ತಿಳಿಯದುದನ್ನು ಹೇಳುವರೇನೆಂದು ಆಕ್ಷೇಪಿಸಲೂ ಬಹುದು. ಹಾಗಾದರೂ ನಾವು ಹೆದರಿ ಸುಮ್ಮನಿರುವುದಕ್ಕಾಗಲೀ ಅವರಾರಿಗೂ ತಿಳಿಯದುದನ್ನು ನಾವಿಲ್ಲಿ ಹೇಳಬಂದೆವೆಂದು ಹೆಮ್ಮೆಪಡುವುದಕ್ಕಾಗಲೀ ನಮಗೆ ಅವಕಾಶವಿಲ್ಲ. ಅದರಿಂದ

ಅನೇಕ ಅಪಾಯಗಳಾಗುವ ಸಂಭವವಿರುವುದೆಂದು ತಿಳಿದೆಚ್ಚತ್ತುಕೊಂಡು, ತಿಳಿವುಳ್ಳವರಿಗೆ ಬಲಗೈಯಂತೆ ಕೆಲಸಕ್ಕೊದಗಿ, ತಿಳಿವಿಲ್ಲದವರಿಗೆ ತಿಳಿಯ ಹೇಳಿ ಎಚ್ಚರಿಸುವುದು ಧರ್ಮವೆಂದೂ ಮಾತ್ರ ನಿವೇದಿಸುವೆವು. ಎಷ್ಟೇ ಪ್ರಾಜ್ಞರಾಗಿದ್ದರೂ ಸ್ವತಃ ಕಷ್ಟಗಳಿಗೆ ಗುರಿಯಾದ ಕಾಲದಲ್ಲಿ ಪ್ರಜ್ಞೆಯನ್ನು ಕಳೆದುಕೊಂಡಿರುವಂತೆ ಮಂದತ್ವದಲ್ಲಿರುವುದು ಎಷ್ಟೋ ಕಡೆ ನಿದರ್ಶನಕ್ಕೆ ಬರುತ್ತಿರುವುದು. ಈ ವೇಳೆಯಲ್ಲಿ ಒಬ್ಬರಿನ್ನೊಬ್ಬರಿಗೆ, ವೇಳೆಯನ್ನರಿತು, ತಮ್ಮ ತಿಳಿವಿಗೆ ಬಂದುದನ್ನು ಹೇಳುವುದು, ಎಚ್ಚರಿಸುವುದು ಸಹಜವಾಗಿರುವುದರಿಂದ, ನಾವಿಷ್ಟನ್ನು ನಿವೇದಿಸಲೇ ಬೇಕಾಗಿರುವುದು. ತಿಳಿದವರು ನೆನಪುಮಾಡಿದೆವೆಂದರಿತು ತಾಳ್ಮೆಯಿಂದ ಮನಸ್ಸಿಗೆ ತಂದುಕೊಳ್ಳಬೇಕೆಂದೂ, ಎಳೆಯರೂ—ತಿಳಿವಿಗೆ ಮರವೆಯುಂಟಾಗಿರುವವರೂ ಕೇಳಿ ತಿಳಿದೆಚ್ಚತ್ತು ಒಲಿದೇಳಬೇಕೆಂದೂ ಬೇಡಿಕೊಳ್ಳುತ್ತಿರುವೆವು. ಸರ್ವಸಾಧಾರಣವಾಗಿ, ಮೌಢ್ಯ—ಮೂರ್ಖತನಗಳಿಗೆ ಬಲಿಬಿದ್ದು ಸಾಯುತ್ತಿರುವರೆಂಬ ಅಪವಾದಕ್ಕೆ ಗುರಿಯಾಗಿರುವ ನಾವು—ಎಂದರೆ, ಸ್ತ್ರೀಯರಾದ ನಾವು, ನಮ್ಮ ನಮ್ಮಲ್ಲಿಯೇ ಸಹನೆಯಿಂದ ವಿಚಾರಮಾಡಿ, ನಮ್ಮಲ್ಲಿ ಮೊದಲಿನಿಂದಲೂ ನೆಲೆಮಾಡಿಕೊಂಡಿರುವ ಕೆಟ್ಟ ಗುಣಗಳಾವಾವುವು, ಇವುಗಳನ್ನು ಹುಡುಕಿ ನೋಡಿ, ಅಂಥವುಗಳನ್ನು ಪ್ರಯಾಸದಿಂದ ಒಂದೊಂದಾಗಿಯೂ ಸ್ವಲ್ಪ ಸ್ವಲ್ಪವಾಗಿಯೂ ಹೊರದೂಡಿ, ಆ ಸ್ಥಳದಲ್ಲಿ ಸದ್ಗುಣಗಳು ನೆಲೆಗೊಳ್ಳುವಂತೆ ಪ್ರಯತ್ನಿಸಬೇಕು. ಅಂಧಪರಂಪರೆಯಾಗಿ ನಮ್ಮವರಲ್ಲಿ ಮನೆಮಾಡಿಕೊಂಡಿರುವ ಆಲಸ್ಯ, ಉದಾಸೀನ, ದುರಭಿಮಾನ, ಕಾಡುಹರಟೆ—ಇವುಗಳನ್ನು ಸಮೂಲವಾಗಿ ಕಿತ್ತೊಗೆಯುವುದು ಅತ್ಯಗತ್ಯವು. ನಮ್ಮ ಶ್ರೇಯೋಭಿಮಾನಿಗಳಾದ ಪುರುಷರು ನಮ್ಮಲ್ಲಿರುವ ಈ ದೌರ್ಜನ್ಯದ ಮೂಲವನ್ನೇ ಭೇದಿಸಲು ಸಂಕಲ್ಪಿಸಿ, ಪ್ರಯತ್ನಿಸಿದಾಗ ಅವರ ಪ್ರಯತ್ನ—ಪ್ರಯಾಸಗಳಿಗೆ ಸಹಾಯವಾಗುವಂತೆಯೂ, ನಮ್ಮ ಆತ್ಮೋನ್ನತಿಗೆ ಸಾಧನವಾಗುವಂತೆಯೂ ನಾವು ಪ್ರಯತ್ನ ಪಡಬೇಕಾದುದು ನಮ್ಮ ಕೆಲಸವಲ್ಲವೆ? ಆದುದರಿಂದ ನನ್ನ ವಿಶ್ವಸನೀಯ ಸೋದರಿಯರೇ! ದಯೆಯಿಟ್ಟು ಕ್ಷಮೆಯನ್ನು ಅವಲಂಬಿಸಿರಿ; ನಾವು ನಿಜವಾದ ಮಾನುಷತ್ವವನ್ನು ಹೊಂದಬೇಕಾದರೆ, ಅದರಲ್ಲಿಯೂ ಸ್ತ್ರೀಜನ್ಮಧಾರಣಮಾಡಿದುದರ

ಕೃತಾರ್ಥತೆಯನ್ನು ಪಡೆಯಬೇಕಾದರೆ, ನಮಗೆ ಶಾಶ್ವತ ಸುಖಾನುಭವ ವನ್ನು ಹೊಂದುವ ಯೋಗವು ಲಭಿಸಬೇಕಾದುದು ಮುಖ್ಯ ಧರ್ಮವೇನೆಂ ಬುದನ್ನು ನಾವೀಗ ಗಮನಿಸಬೇಕು. ಈಗ ನಮ್ಮನ್ನು ನಾವೇ ಉದ್ಧಾರ ಮಾಡಿಕೊಳ್ಳುವುದಕ್ಕಾಗಲಿ, ನಮ್ಮವರ ಉದ್ಧಾರಕ್ಕಾಗಿ ಕಂಕಣಬದ್ಧರಾಗಿ ನಿಲ್ಲುವ ಪುರುಷರ ಕಾರ್ಯಸಿದ್ಧಿಗಾಗಲಿ, ಧರ್ಮದ ದಶಾಂಗಗಳಾದ ೧. ವಿವೇಚನೆ, ೨. ಪಶ್ಚಾತ್ತಾಪ, ೩. ಕರ್ತವ್ಯಜ್ಞಾನ, ೪. ಧರ್ಮಶ್ರದ್ಧೆ, ೫. ಚಿತ್ತಸ್ಥೈರ್ಯ, ೬. ಸತ್ಯಾನುಸಂಧಾನ, ೭. ಸ್ವಾರ್ಥತ್ಯಾಗ ಅಥವಾ ಪಾರಮಾರ್ಥಿಕ ಬುದ್ಧಿ, (೮.) ಸರ್ವಸಮತಾಭಾವ, (೯.) ಅಚಲಭಕ್ತಿ, (೧೦.) ಸರ್ವೇಶ್ವರ ಸೇವಾ—ಎಂಬೀ ಯೋಗಗಳನ್ನು ಅನುಕ್ರಮವಾಗಿ ನಾವು ಅಭ್ಯಾಸಮಾಡಬೇಕು. ಆದುದರಿಂದ ಈ ದಶವಿಧ ಯೋಗಗಳ ಗುಣ, ಸ್ವರೂಪ, ಫಲಗಳನ್ನು ಕುರಿತು ಕ್ರಮವಾಗಿ ವಿಮರ್ಶಿಸುವುದು ಅವಶ್ಯಕ ವಲ್ಲವೇ?

೧. **ವಿವೇಚನೆ**—ವಿವೇಚನೆಯೆಂಬುದೇ ಸದಸದ್ವಿವೇಕ, ಸಾರಾ ಸಾರ ವಿಚಾರ ಜ್ಞಾನ—ಅಥವಾ ವಸ್ತುವಿನ ಗುಣ-ದೋಷ, ಸಾಧಕ-ಬಾಧಕ ಗಳನ್ನು ಮುಂದಿಟ್ಟು ಎಚ್ಚರಿಸುವಂತಹ ಪ್ರಜ್ಞೆ. ಇದು ಮಾನವನ ಜನ್ಮ ದೊಡನೆ ಉಂಟಾಗಿರುವ ಒಂದು ಶಕ್ತಿಯಾಗಿರುವುದು. ಇದರ ಪ್ರಭಾವ ದಿಂದಲೇ ಮಾನವರು—'ಇದು ಕೆಟ್ಟುದು, ಇದು ಒಳ್ಳೆಯದು' ಎಂಬು ದನ್ನು ತಿಳಿದು, ಒಳ್ಳೆಯದನ್ನು ಹಿಡಿದು ಕೆಟ್ಟುದನ್ನು ಬಿಡಲು ಶಕ್ತರಾಗುವರು. ಆದರೆ, ಜನ್ಮ ಸಹಜ ಗುಣವಾಗಿದ್ದರೂ ಅಂತಸ್ಥವಾಗಿಯೇ ಇರುವುದಲ್ಲದೆ, ಅಭ್ಯಾಸ ಸಾಧನಗಳಿಲ್ಲದೆ ಪ್ರಕಾಶಕ್ಕೆ ಬರುವಂತಿಲ್ಲ. ಅದು ಪ್ರಕಾಶಕ್ಕೆ ಬಂದಲ್ಲದೆ ಮಾನವನ ಬುದ್ಧಿ ವಿಕಾಸಕ್ಕಾಗಲಿ, ಕ್ರಿಯಾಸಿದ್ಧಿಗಾಗಲಿ ಯಾವುದಕ್ಕೂ ಅವಕಾಶವಿರುವುದಿಲ್ಲ. ಕೆಲವುವೇಳೆಗಳಲ್ಲಿ ಎಂದರೆ ಮಾನವರ ಹೃದಯದಲ್ಲಿ ದುರಾಗ್ರಹ, ದುರಭಿಮಾನ, ಉದಾಸೀನ, ಆಲಸ್ಯಾದಿಗಳ ದೋಷಗಳು ಪ್ರವೇಶಮಾಡಿದುವೆಂದರೆ ಅವುಗಳ ವಿಷವು ಸಂಸರ್ಗ ದೋಷ ವನ್ನು ತಡೆದು, ಮುಂದೆ ನಿಲ್ಲಲರಿಯದೆ ತನ್ನಲ್ಲಿ ತಾನೇ ಲಯಿಸಿಹೋಗು ವುದು. ಈ ವಿವೇಕವು ಲಯಹೊಂದಿದ ಮೇಲಂತೂ ಆ ಮಾನವರ ಸ್ಥಿತಿ, ವನ್ಯಪಶುಗಳಿಗಿಂತಲೂ ಕೀಳಾಗುವುದು. ಹಾಗಾಗಲು ಅವಕಾಶ

ಕೊಡದೆ ಅವನತಿಹೊಂದುತ್ತಿರುವ ನಮ್ಮ ಸ್ಥಿತಿಗೆ ಈ ವಿವೇಕದ ಅಜ್ಞಾತಾವಸ್ಥೆಯೇ ಕಾರಣವಾಗಿರುವುದೆಂಬುದನ್ನು ತಿಳಿದು, ಅದನ್ನು ಪ್ರಕಾಶಕ್ಕೆ ತರಲು ಪ್ರಯತ್ನಪಟ್ಟು ವಿಚಾರಮಾಡಿದೆವಾದರೆ ಆಗ ಅದು ಮತ್ತೆ ಹೃತ್ಕೋಶದಲ್ಲಿ ಅಡಗಿರುವುದನ್ನು ಬಿಟ್ಟು ಮೆಲ್ಲಮೆಲ್ಲನೆ ಸಂಚರಿಸಿ ನಮ್ಮ ಬುದ್ಧಿಗಳಲ್ಲಿ ಹೊಕ್ಕು ಕ್ರಮ ಕ್ರಮವಾಗಿ ತನ್ನ ಶಕ್ತಿಯನ್ನು ಪ್ರದರ್ಶಿಸುವುದು. ಇದರಿಂದ ಆಚಾರ ವಿಚಾರಗಳೇ ಮೊದಲಾದ ಕರ್ಮಕಲಾಪಗಳಲ್ಲಿ ಸೇರಿರುವ ಗುಣದೋಷಗಳನ್ನು ತೆಗೆದು ನಮಗೆ ಸ್ಪಷ್ಟವಾಗಿ ತಿಳಿದುಬರುವಂತೆ ಮುಂದಿಟ್ಟು ವಿಮರ್ಶೆಮಾಡುವ ಪ್ರಜ್ಞಾಶಕ್ತಿಯುಂಟಾಗುತ್ತದೆ. ಈ ಪ್ರಜ್ಞೆಯೇ ಮಾನವರ ಆತ್ಮೋನ್ನತಿ, ಮಾನಸಿಕೋನ್ನತಿಗಳಿಗೆ ಆಧಾರವಾಗಿದ್ದು ಸಮಸ್ತ ಸುಖಕ್ಕೂ ಸಾಧನವೆನ್ನಿಸುವುದು.

೨. **ಪಶ್ಚಾತ್ತಾಪ**—ಈ ಪಶ್ಚಾತ್ತಾಪವೆಂಬುದೇ ಸದಸದ್ವಿವೇಕದ ಮೂಲಕ ತನ್ನಿಂದಾಚರಿಸಲ್ಪಟ್ಟ ಕಾರ್ಯಕಲಾಪಗಳ ಗುಣದೋಷಗಳನ್ನು ತಿಳಿದು ಅದಕ್ಕಾಗಿ ಹೊಂದುವ ಪರಿತಾಪ ಅಥವಾ ಹೃದಯತಲ್ಲಣ. ಇದು ತಲೆದೋರಿತೆಂದರೆ, ಅಲ್ಲಿಂದ ಮುಂದೆ ಅಪರಾಧಕ್ಕೆ ಎಡೆ ಸಿಗಲಾರದು. ಏಕೆಂದರೆ, ಈ ಪಶ್ಚಾತ್ತಾಪವೆಂಬುದು ಹೃದಯದ ಒಂದು ಮೂಲೆಯಲ್ಲಿದ್ದು ತನ್ನಿಂದಾದ ಅಪರಾಧಗಳ ಸ್ಮರಣೆ ಬಂದಾಗಲೆಲ್ಲಾ ಉರಿಯಾಗುತ್ತಲೂ ಹೊಗೆಯಾಡುತ್ತಲೂ ದಹಿಸುತ್ತಿರುವುದು. 'ನಾನೇಕೆ ಈ ಅಪರಾಧವನ್ನು ಮಾಡಿದೆನು? ಈ ಅಪರಾಧದ ಫಲಾನುಭವವನ್ನು ನಾನು ಹೇಗೆ ಭೋಗಿಸಲಿ?' ಎಂದೋ; ಇಲ್ಲವೆ 'ನನಗೆ ಭಗವಂತನು ವಿವೇಕ-ಜ್ಞಾನವನ್ನು ಕೊಟ್ಟಿದ್ದು ನಾನು ಹೀಗೆ ಪಶುವಿನಂತೆ ತಿರುಗಿದೆನೇಕೆ? ನನ್ನ ತಪ್ಪಿಗೆ ಪ್ರಾಯಶ್ಚಿತ್ತವುಂಟೆ?'—ಎಂದೋ, ಅಥವಾ 'ಕರಣ ಕಳೇಬರಗಳನ್ನೂ ಬುದ್ಧಿ ಮೇಧಾಶಕ್ತಿಗಳನ್ನೂ ಹೊಂದಿ ಅನುಕೂಲವಿದ್ದೂ ನಾನು ಈವರೆಗೆ ಹೀಗೆ ತಿಂದುಂಡು ಮಲಗುವುದರಲ್ಲಿಯೇ ಮನಸ್ಸಿಟ್ಟು ಯಾರಿಗೂ ಏನೊಂದೂ ಉಪಯೋಗವಾಗುವ ಕಾರ್ಯವನ್ನು ಮಾಡದೆ ವ್ಯರ್ಥ ಕಾಲಕಳೆದೆನಲ್ಲಾ. ನನಗಿಂತಲೂ ಮೂರ್ಖನಾರು! ನಾನು ಹುಟ್ಟಿದುದರ ಸಾರ್ಥಕತೆಯೇನಾಯಿತು? ಜಡನಾಗಿ ಕಾಲವೆಲ್ಲವನ್ನೂ ವ್ಯರ್ಥವಾಗಿ

ಕಳೆದುಕೊಳ್ಳುವಂತೆ ಮಾಡಿದ ಶತ್ರು ಸ್ವರೂಪವಾದ ಆ ಆಲಸ್ಯ ರೋಗಕ್ಕೆ ಎಡೆಗೊಟ್ಟೆನೇಕೆ? ದುರ್ಲಭ ಮಾನವ ಜನ್ಮವನ್ನೆತ್ತಿಯೂ ದುಷ್ಟ ವನ್ಯ ಮೃಗಕ್ಕೂ ನೀಚವಾಗಿ ಚರಿಸಿದೆನಲ್ಲಾ! ನೀತಿಬಾಹಿರನಾದ ನನಗೆ ಶಾಶ್ವತ ಸುಖಾನುಭವದ ಆಶೆಯಿನ್ನುಂಟೇ? ಯಾವ ವಿಧವಾದ ಪ್ರಾಯಶ್ಚಿತ್ತದಿಂದ ನನ್ನೀ ದೋಷಗಳನ್ನು ಕಳೆದುಕೊಂಡು ಶುದ್ಧನಾಗುವೆನು.'. ಎಂಬೀ ವಿಧ ವಾದ ಚಿಂತಾತರಂಗಗಳು ಮೇಲೆ ಮೇಲೆ ತಲೆದೋರಿ ಅದರಿಂದ ತ್ರಿದೋಷ ಸಮ್ಮಿಶ್ರವಾದ ಮಾನವರ ಪ್ರಕೃತಿಗೆ ಸಂಸ್ಕಾರವನ್ನುಂಟುಮಾಡಿ ದೋಷ ವನ್ನು ತೆಗೆದುಹಾಕುವುದು. ಈ ವಿಧವಾದ ಪಶ್ಚಾತ್ತಾಪವು ತಲೆದೋರದೆ ಬಾಹ್ಯದಲ್ಲಿ ಮತ್ತಾವ ಪ್ರಾಯಶ್ಚಿತ್ತ ಮಾಡಿಕೊಂಡರೂ ಪಾಪವಿಮೋಚನ ವಾಗುವುದಿಲ್ಲ. ಅಪರಾಧವು ಯಾವುದೇ ಬಗೆಯದಾಗಿರಲಿ, ಅದನ್ನು ಕುರಿತು, ಪಶ್ಚಾತ್ತಾಪ ಅಥವಾ ಪರಿತಾಪವಾಗುವವರೆಗೆ ಅಪರಾಧವು ಕರಗಲಾರದು. ಪಶ್ಚಾತ್ತಾಪಕ್ಕೆ ಗುರಿಯಾಗಿ ಸಂತಪ್ತ ಹೃದಯರಾದವರು ಸಮಸ್ತ ದೋಷಗಳಿಂದಲೂ ಮುಕ್ತರಾಗಿ ಸರ್ವೇಶ್ವರನ ಕೃಪೆಗೆ ಪಾತ್ರ ರಾಗುವರು. ಏಕೆಂದರೆ ಭಗವತ್ಕೃಪಾದತ್ತವಾದ ವಿವೇಕವನ್ನು ಕಾಲಾ ನಂತರದಲ್ಲಿಯಾದರೂ ಕಂಡುಹಿಡಿದು ಅದರಿಂದ ಸ್ವಯಂಕೃತಾಪರಾಧ ಗಳನ್ನು ತಿಳಿದು ಮುಂದಿನ ಕರ್ತವ್ಯದ ಕಡೆಗೆ ಕಣ್ದೆರೆದರೆಂದು ಆತನು ಇವರಲ್ಲಿ ಕನಿಕರವನ್ನು ತೋರಿಸಿಯೇ ತೋರಿಸುವನು.

೪. **ಸ್ವಕರ್ತವ್ಯಜ್ಞಾನ**—ಈ ಕರ್ತವ್ಯಜ್ಞಾನವೆಂಬುದು ಮೇಲೆ ಹೇಳಿದ ಸ್ವಯಂಕೃತ ಕರ್ಮಗಳ ವಿವೇಚನೆಯುಂಟಾಗಿ ತನ್ಮೂಲಕ ಉಂಟಾಗುವ ಪರಿತಾಪದಿಂದ ಮನಸ್ಸಿಗೆ ಮುಂದೆ ಮಾಡಬೇಕಾದುದೇನು? ಆವ ಪಥದಲ್ಲಿ ಕಾಲಿಡಬೇಕು? ಏನು ಮಾಡಿದರೆ ಆತ್ಮತೃಪ್ತಿಯಾದೀತು? ಎಂಬಿವನ್ನು ಕುರಿತು ವಿಚಾರವುಂಟಾಗಲು, ಹಾಗೆ ವಿಚಾರಮಾಡುತ್ತ ಬಂದಂತೆಲ್ಲಾ, ತಾನು ಇಂತಹನು, ತಾನು ಅನುಸರಿಸಬೇಕಾದ ಮಾರ್ಗ ವಿದು, ಮಾಡಬೇಕಾದ ಆಗತ್ಯಗಳಿವು, ಪಾಲಿಸಬೇಕಾದ ಧರ್ಮವಿದು— ಎಂಬೀ ವಿಧವಾದ ಸ್ವರೂಪಜ್ಞಾನವೂ ತತ್ಸಂಬಂಧವಾದ ವಿಧಿಗಳ ಬೋಧನವೂ ಉಂಟಾಗುವುವು. ಇದನ್ನೇ ಕರ್ತವ್ಯಜ್ಞಾನವೆಂದು ಹೇಳ ಬೇಕು. ಯಾರಿಗಾದರೂ ನಿಜಸ್ವರೂಪದ ಜ್ಞಾನವಾಗದೆ ಸ್ವಕರ್ತವ್ಯ

ಸ್ಫೂರ್ತಿಯಾಗುವುದಿಲ್ಲ. ಹಾಗೆ ಸ್ವರೂಪಜ್ಞಾನ, ಸ್ವಕರ್ತವ್ಯ ಸ್ಫೂರ್ತಿಗಳುಂಟಾಗುವವರೆಗೆ ನಿಜವಾದ ಮಾನುಷತ್ವವುಂಟಾಗುವುದಿಲ್ಲ. ಮಾನವನೆನಿಸಬೇಕಾದರೆ ಇದು ಆವಶ್ಯಕವಾಗಿ ಇದ್ದೇ ಇರಬೇಕಾಗುವುದು.

೪. **ಧರ್ಮಶ್ರದ್ಧೆ**—ಧರ್ಮದ ಮಹತ್ವವನ್ನು ತಿಳಿದು ಅದರಲ್ಲಿಡುವ ಆಸಕ್ತಿಯೇ ಧರ್ಮಶ್ರದ್ಧೆಯೆನಿಸುವುದು. ಸ್ತ್ರೀಯರಾಗಲಿ ಪುರುಷರಾಗಲಿ ತಮ್ಮ ತಮ್ಮ ಧರ್ಮವೇನೆಂಬುದನ್ನು ಅರಿತು ಪೂರ್ಣವಿಶ್ವಾಸದಿಂದ ಅದನ್ನು ಆಚರಿಸುವರು ಸ್ವಧರ್ಮನಿಷ್ಠರೆಂದೂ ಶ್ರದ್ಧಾಳುಗಳೆಂದೂ ಎನ್ನಿಸುವರು. ಮೇಲೆ ಹೇಳಿದ ಕರ್ತವ್ಯಜ್ಞಾನವುಂಟಾಯಿತೆಂದರೆ 'ಸತಿ'ಯೆನ್ನಿಸಬೇಕಾದ ತನಗೆ ಮಾತಾಪಿತೃ ಗುರುದೈವಭಕ್ತಿ, ನಿಷ್ಕಲ್ಮಷವಾದ, ಅಚ್ಛೇದ್ಯವಾದ ಪತಿಪ್ರೇಮ, ಆಶ್ರಿತವಾತ್ಸಲ್ಯ, ಕ್ಷಮಾ, ಧೈರ್ಯ, ದಯಾ, ಕನಿಕರ, ಶ್ರಮಸಹಿಷ್ಣುತಾ—ಮೊದಲಾದುವು ತನ್ನ ಮುಖ್ಯ ಧರ್ಮವೆಂದೂ, ಪತಿಯೇ ತನ್ನ ಪರದೈವವಾದುದರಿಂದ ಆತನ ಸೇವೆಯೇ ತನಗೆ ಪರಮಗತಿ ಸಾಧನವೆಂದೂ, ಆತನ ಮನಸ್ಸಂತೋಷವೇ ತನ್ನ ಸತೀಧರ್ಮದ ಸಾಫಲ್ಯವೆಂದೂ ಆತನ ಸುಪ್ರಸನ್ನತೆಯೇ ಸಮಸ್ತ ಸುಖಸಂಪದೈಶ್ವರ್ಯವೆಂದೂ ನಂಬಿ, ಆತನ ಸುಖ ಸಂತೋಷ ಸುಪ್ರಸನ್ನತೆಗಳಿಗೆ ತಕ್ಕಂತೆ ವರ್ತಿಸುವುದೇ ಸ್ತ್ರೀಯರ ಧರ್ಮವು. ಎಂದರೆ ಪತಿಯ ಧರ್ಮ ಕರ್ಮ ಕ್ರಿಯೆಗಳಿಗೆ ಸಲಕರಣೆಗಳನ್ನು ಒದಗಿಸಿ, ಆಹಾರ ವಿಹಾರ ವಿಷಯಗಳಿಗೆ ಮನಸ್ಸು ಕೊಟ್ಟ ಮಾತ್ರಕ್ಕೆ ಇವಳು ತನ್ನ ಧರ್ಮವನ್ನು ಪಾಲಿಸಿದಂತಾಗಲಿಲ್ಲ. ಆತನ ಧರ್ಮ ಕರ್ಮಗಳಿಗೆ ತಾನು ಸಹಭಾಗಿನಿಯಾಗಿರುವೆನೆಂಬ ಭರವಸೆಯಿಂದ, ಶುದ್ಧಮನಸ್ಸಿನಿಂದ ಅವುಗಳಿಗೆ ನ್ಯೂನತೆಯುಂಟಾಗದಂತೆ ನಿಂತು, ಸಕಲ ಕ್ರಿಯಾಕಲಾಪಗಳಿಗೂ ಸಹಕಾರಿಣಿಯಾಗಿದ್ದು ಪರಿಚರ್ಯೆಮಾಡುತ್ತಲೂ, ಆತನ ಗುರುದೈವವು ತನಗೂ ಪರಮಗುರು ದೈವವೆಂದೂ, ಆತನ ಭೃತ್ಯ ಪೋಷ್ಯವರ್ಗದವರ ವಿಚಾರಣೆಯೆಲ್ಲವೂ ತನಗೆ ಸೇರಿದುವೆಂದೂ ಯಾವ ಕಾಲಕ್ಕೂ ಯಾವ ರೀತಿಯಿಂದಲೂ ಆತನ ಮನಸ್ಸಿಗೆ ಖೇದವಾಗದಂತೆ, ಹಿತವೆನಿಸುವ ಕಾರ್ಯಗಳನ್ನು ಮಾಡುತ್ತಲೂ ಆಪ್ಯಾಯನಗೊಳಿಸುವಂತಹ, ಹಿತವೂ ವಿಹಿತವೂ ಪ್ರಿಯವೂ ಆದ ಭಾಷಣಗಳನ್ನು ಮಾಡುತ್ತಲೂ, ಒಂದುವೇಳೆ, ಪತಿಯು

ಆಗ್ರಹಯುಕ್ತನಾಗಿ ತನ್ನನ್ನು ದಂಡಿಸಿದರೂ ತಾನು ಖತಿಗೊಳ್ಳದೆ ಆತನಲ್ಲಿ ಸಮಯವರಿತು ಕ್ಷಮೆಯನ್ನು ಕೋರಿ ಪ್ರಸನ್ನತೆಯನ್ನು ಸಂಪಾದಿಸಿಕೊಳ್ಳಲು ಪ್ರಯತ್ನಿಸುವುದೂ, ಅವನ ಮನಸ್ಸನ್ನು ತಿಳಿದು ವರ್ತಿಸುವುದೂ ಸತಿಗೆ ಧರ್ಮವು. ಇದರಿಂದಲೇ ಇವರಿಗೆ ಶಾಶ್ವತ ಸುಖವುಂಟಾಗುವುದಲ್ಲದೆ ಇದನ್ನು ಬಿಟ್ಟು ಕೇವಲ ವ್ರತ, ನಿಯಮ, ಉಪವಾಸ, ಜಾಗರಣಗಳಿಂದ ಶಾಶ್ವತ ಸುಖಪ್ರಾಪ್ತಿಯಾಗುವುದಿಲ್ಲ ಎಂದು ದೃಢಭಾವದಿಂದ ವರ್ತಿಸುವುದೇ ಧರ್ಮಶ್ರದ್ಧೆ !

**೫. ಚಿತ್ತಸ್ಥೈರ್ಯ**—ಮೇಲೆ ಹೇಳಿದ ಧರ್ಮಶ್ರದ್ಧೆಯುಂಟಾಯಿತೆಂದರೆ ಅದನ್ನು ಅನುಷ್ಠಿಸಲು, ಪದೇಪದೇ ಬರುವ ವಿಘ್ನಗಳಿಂದ ಬುದ್ಧಿಗೆಡದೆ ಮನಸ್ಸನ್ನು ಬಿಗಿಹಿಡಿದು ಬುದ್ಧಿಯ ವಶದಲ್ಲಿಡುವುದೇ ಚಿತ್ತಸ್ಥೈರ್ಯವೆನಿಸುವುದು. ಚಿತ್ತಸ್ಥೈರ್ಯವಿಲ್ಲದಿದ್ದರೆ ಧರ್ಮಕ್ಕೆ ಹಾನಿಯನ್ನುಂಟುಮಾಡಲು ಬರುವ ದುಷ್ಟ ವಿಷಯಗಳ—ಅಥವಾ ಕಷ್ಟ, ದಾರಿದ್ರ್ಯ, ಕ್ಲೇಶಗಳೇ ಮೊದಲಾದುವುಗಳ ವೇಗಕ್ಕೆ ಮನಸ್ಸು ಚದರಿ, ಧರ್ಮದಮೇಲಿನ ಅಭಿಮಾನವನ್ನು ಸಡಿಲಮಾಡುವುದು. ಚಿತ್ತಸ್ಥೈರ್ಯವಿದ್ದರೆ ಮೇಲಿನ ವಿಘ್ನಗಳನ್ನು ಸಾಹಸ ಸಹಿಷ್ಣುತೆಗಳಿಂದ ಜಯಿಸಿ, ಧರ್ಮಕ್ಕೆ ಯಾವತರದಿಂದಲೂ ಗ್ಲಾನಿಯುಂಟಾಗದಂತೆ ಜಾಗರೂಕತೆಯಿಂದಲೂ ದಕ್ಷತೆಯಿಂದಲೂ ಪಾಲಿಸುತ್ತ ಬರುವುದು. ಯಾವುದೇ ಕಾರ್ಯಸಿದ್ಧಿಯಾಗಬೇಕಾದರೂ ಚಿತ್ತಸ್ಥೈರ್ಯವು ಮುಖ್ಯವಾಗಿರಬೇಕು.

**೬. ಸತ್ಯಾನುಸಂಧಾನ**—ಅನೃತ ವಂಚನೆಗಳಿಲ್ಲದೆ ನಿಜ ನಿಷ್ಠೆಯಿಂದ ವರ್ತಿಸುವುದೇ ಸತ್ಯಾನುಸಂಧಾನವೆನ್ನಿಸುವುದು. ಮೇಲೆ ಹೇಳಿದ ಧರ್ಮಶ್ರದ್ಧೆಯೂ ತತ್ಸಂಬಂಧವಾದ ಚಿತ್ತಸ್ಥೈರ್ಯವೂ ಉಂಟಾಯಿತೆಂದರೆ ಈ ಸತ್ಯವನ್ನು ಅನುಷ್ಠಾನದಲ್ಲಿ ತರಬೇಕೆಂಬ ಶುದ್ಧಭಾವನೆಯು ಉತ್ಪನ್ನವಾಗುವುದು. ಇದರಿಂದ ಕಾಯಿಕ ಮಾನಸಿಕ ಮತ್ತು ವಾಚಕಗಳಲ್ಲಿಯೂ ನಿಜ ನಿಷ್ಠೆ—ಎಂದರೆ ಕುಟಿಲ ನಟನೆ, ವಂಚನೆ, ಅನೃತ ಭಾಷಣಗಳಾವುವೂ ಇಲ್ಲದೆ ತ್ರಿಕರಣಗಳಲ್ಲಿಯೂ ಒಂದೇ ವಿಧವಾದ ನಿಜವನ್ನೇ ಹೊಂದಿರುವುದು ಸತ್ಪುರುಷರ ಸನ್ಮಾರ್ಗಾನುಯಾಯಿಗಳ ಸಲ್ಲಕ್ಷಣವೆಂದೂ, ಸತ್ಯವೇ ನಿತ್ಯ

ಸುಖಕ್ಕೆ ಮುಖ್ಯಸ್ಥಾನವೆಂಡೂ ತಿಳಿದು ಅದರಂತೆ ಅನುಷ್ಠಾನಕ್ಕೆ ತರುವ ಬುದ್ಧಿಶಕ್ತಿಯು ಹುಟ್ಟುವುದು. ಈ ಶಕ್ತಿಯುಂಟಾಯಿತೆಂದರೆ ಇದು—'ಅನೃತವನ್ನು ಮೊದಲು ನಿಗ್ರಹಿಸುವುದು; ಎಂದರೆ ಸುಳ್ಳೆಂಬ ಮುಳ್ಳು ನಾಲಗೆಯಲ್ಲಿ ನೆಡುವಂತೆ, ತಗಲುವಂತೆ ಎಂದಿಗೂ ಅವಕಾಶಕೊಡಬಾರದು. ಈ ಮುಳ್ಳು ನಾಲಗೆಗೆ ತಗಲಿದರೆ ನಾಲಗೆಯು ದೋಷಯುಕ್ತವಾಗಿ ಧರ್ಮವನ್ನು ಕೆಡಿಸಲು ಕಾರಣವಾಗುವುದು. 'ನಾಲಗೆಗೆ ನರವಿಲ್ಲ' ಎಂದರೆ ನರಕಕ್ಕೆ ಹೇತುಗಳಾದ ದುರ್ವಿಷಯಗಳ ಲೇಪನವಿಲ್ಲದೆ ಶುದ್ಧವಾಗಿರುವುದೇ ಇದರ ಲಕ್ಷಣವು!' ಎಂಬ ತತ್ವವನ್ನು ಮರೆತು, 'ನರವಿಲ್ಲದ ನಾಲಗೆ ನೂರೆಂಟು ಕಡೆಗೂ ತಿರುಗುವುದೆಂಬ ಅನರ್ಥಕ್ಕೆ ಅವಕಾಶವಾಗುವಂತೆ ಅದರಲ್ಲಿ ಸುಳ್ಳೆಂಬ ಮುಳ್ಳು ತಗಲಲು ಎಡೆಗೊಟ್ಟರೆ ಆ ಮುಳ್ಳಿನ ಸಂಬಂಧದಿಂದ ವಂಚನೆಯೆಂಬ ಕೀವು ತುಂಬಿ ಕುಟಿಲ ನಟನೆಯೆಂಬ ಯಾತನೆಯು ಹುಟ್ಟುವುದು. ಇವು ಮೂರೂ ಮೂರು ಮಹಾಗ್ರಹಗಳಂತೆ ಮೇಲಿನ ಯೋಗಗಳಿಗೆ ಪ್ರತಿಸ್ಪರ್ಧಿಗಳಾಗಿ ನಿಲ್ಲುವುವು. (ಇವುಗಳ ಪ್ರತಾಪವೆಂತಹದೆಂಬುದು ಹಿಂದೆ ಪೂರ್ವಾರ್ಧದಲ್ಲಿ ವಿಮರ್ಶಿಸಿರುವುದರಿಂದಿಲ್ಲಿ ಹೇಳಿಲ್ಲ.) ಆದುದರಿಂದ ಈ ಕೆಟ್ಟ ಜಾತಿಯ ಮುಳ್ಳು ನೆಡದಂತೆ ನೋಡಿಕೊಳ್ಳುವುದೂ, ಪ್ರಮಾದದಿಂದ ನಾಲಗೆಗೆ ಇದೇನಾದರೂ ತಗಲಿದರೂ ಕೀವು ತುಂಬುವ ಮೊದಲೇ ಅದನ್ನು ಮೇಲೆ ಹೇಳಿದ ಶಕ್ತಿಯೆಂಬ ಸೂಜಿಯಿಂದ ಕಿತ್ತು ತೆಗೆದುಹಾಕುವುದೂ ಈ ಸತ್ಯಾನುಸಂಧಾನದ ಕಾರ್ಯವು.

೭. **ಸ್ವಾರ್ಥತ್ಯಾಗ ಮತ್ತು ಪಾರಮಾರ್ಥಿಕ ಬುದ್ಧಿ**—ಕೇವಲ ಐಹಿಕ ಸುಖಾಭಿಲಾಷೆಯಿಂದ ಸ್ವಶರೀರಾಭಿಮಾನವೇ ಪ್ರಧಾನಗುಣವಾಗಿ ಭಾವಿಸುವುದು ಸ್ವಾರ್ಥವೆನ್ನಿಸುವುದು. ಶರೀರ ಸುಖವನ್ನು ಪ್ರಧಾನವಾಗಿ ಎಣಿಸದೆ, ಆತ್ಮ ಸಮಾಧಾನವನ್ನೇ ಪ್ರಧಾನವಾಗಿ ಭಾವಿಸಿ ಪಾರತ್ರಿಕ ಸುಖದ ಕಡೆಗೆ ವಿಶೇಷವಾದ ದೃಷ್ಟಿಯನ್ನಿಡುವುದು, ಸ್ವಾರ್ಥತ್ಯಾಗ ಮತ್ತು ಪಾರಮಾರ್ಥಿಕ ಬುದ್ಧಿಯೆನ್ನಿಸುವುದು. ಇಂತಹ ಪಾರಮಾರ್ಥ ಜ್ಞಾನವು ಸುಲಭವಾಗಿ ಸಾಧಿಸತಕ್ಕುದಲ್ಲ. ಮೇಲೆ ಹೇಳಿದ ಆರು ಅಂಗಗಳೂ ಸಾಧಿಸಲ್ಪಟ್ಟ ಮೇಲೆ ಇದರ ಲಾಭವಾಗುವುದು ಸುಲಭ, ಅದಕ್ಕೆ ಮೊದಲು ದುರ್ಲಭ; ಏಕೆಂದರೆ 'ನಾನು, ನನ್ನದು, ಇದು ನನಗಾಗಿ,

ಇವರು ಕೇವಲ ನನ್ನವರೇ! ಇದಕ್ಕೆ ಅಧಿಕಾರಿ ನಾನೇ' ಎಂಬೀ ಅಹಂಕಾರ ಮಮಕಾರಗಳು ಪ್ರತಿಯೊಬ್ಬರಲ್ಲಿಯೂ ಇರುವುವು. ಇವು ಗಳಿದ್ದಲ್ಲಿ ಸ್ವಶರೀರಾಭಿಮಾನವು ಇದ್ದೇ ಇರುವುದು. ಈ ಅಹಂಕಾರ ಮಮಕಾರಗಳ ಸ್ವಾರ್ಥಭಾವನೆ ಇರುವವರೆಗೂ ಆತ್ಮೋದ್ಧಾರಕ್ಕೆ ಮಾರ್ಗವಿಲ್ಲ. 'ನಾನಾರು, ಎಲ್ಲಿಯವನು, ಇಲ್ಲಿಗೇಕೆ ಬಂದೆ? ಕರೆತಂದವ ರಾರು? ಏತಕ್ಕಾಗಿ, ಏನುಮಾಡಬೇಕೆಂದು?' ಎಂಬೀ ಜಿಜ್ಞಾಸೆಯುಂಟಾ ದಲ್ಲದೆ ಪರಮಾರ್ಥ ತತ್ವ ಬೋಧೆಯಾಗುವುದಿಲ್ಲ. (ಅದು ಆಗದೆ ಆತ್ಮೋ ದ್ಧಾರದ ಮಾತೆಲ್ಲಿ?) ಜಿಜ್ಞಾಸೆಯಿಂದ 'ನಾನು ಪರಮಾತ್ಮನ ಕಿಂಕರನು, ಆತನ ಕಟ್ಟಳೆಯಂತೆ ಈ ಜನ್ಮವನ್ನೆತ್ತಿರುವೆನು. ಆತನ ಇಚ್ಛೆಯಂತೆ ಧರ್ಮಪ್ರತಿಪಾದನರೂಪವಾದ ಆತನ ಸೇವಾಕಾರ್ಯವನ್ನು ಮಾಡುವುದ ಕ್ಕಾಗಿ ಅವನಿಂದಲೇ ನಿಯಮಿಸಲ್ಪಟ್ಟು ನಿಂತಿರುವೆನು. ಅವನ ಕಿಂಕರನಾದ ನನಗೆ ಇನ್ನುಳಿದ ಆತನ ಕಿಂಕರರೆಲ್ಲರೂ ಬಂಧುವರ್ಗಕ್ಕೆ ಸೇರಿರುವರು. ಪರ ಮಾತ್ಮನ ನಿಯಮಾನುಸಾರ ಜನ್ಮವೆತ್ತಿರುವ ಆ ನನ್ನ ಬಂಧುಗಳೊಡನೆ ಸೌಹಾರ್ದ್ರಬುದ್ಧಿಯಿಂದ ಸೇರಿ ಶಕ್ತ್ಯುಚಿತ ಸೇವಾಕಾರ್ಯಗಳನ್ನು ಮಾಡು ವುದೇ ನನ್ನ ಕರ್ತವ್ಯ. ಕರ್ತವ್ಯಸಿದ್ಧಿಯಾದಮೇಲೆ ನನಗಾತನ ಸಂಪೂರ್ಣ ಅನುಗ್ರಹವು ಲಭಿಸುವುದರಿಂದ ಧನ್ಯತೆಯಾಗುವುದು' ಎಂಬ ಬುದ್ಧಿ ಯುಂಟಾಗುವುದು. ಇದೇ ಪಾರಮಾರ್ಥಿಕ ಬುದ್ಧಿ. ಈ ಪಾರಮಾರ್ಥಿಕ ಬುದ್ಧಿಯು ನಮ್ಮಲ್ಲಿ—ಎಂದರೆ ಸ್ತ್ರೀಯರಲ್ಲಿ ಅತ್ಯಗತ್ಯವಾಗಿ ಇರಬೇಕು. ಪಾರಮಾರ್ಥಿಕ ಬುದ್ಧಿಯುಳ್ಳ ಸ್ತ್ರೀಯರಿಗೆ ತಪಸ್ಸಿದ್ಧಿಯುಂಟಾಗುವುದರಲ್ಲಿ ಸಂದೇಹವೇ ಇಲ್ಲ.

೮. **ಸರ್ವಸಮತಾಭಾವ**—ಮೇಲೆ ಹೇಳಿದ ಪಾರಮಾರ್ಥಿಕ ಬುದ್ಧಿಯುತ್ಪನ್ನವಾದ ಬಳಿಕ ಸರ್ವರಲ್ಲಿಯೂ ಪರಮಾತ್ಮನಿರುವನು. ಸರ್ವರೂ ಆತನ ದೃಷ್ಟಿಗೆ ಸಮರಾಗಿಯೇ ಕಾಣುವರು. ಸರ್ವರೂ ಆತನ ಇಚ್ಛಾಧೀನರಾಗಿ ನಡೆದು ಸುಖಪಡುವುದಕ್ಕಾಗಿಯೇ ಹುಟ್ಟಿರುವರು ಎಂದು ಭಾವಿಸಿ, ಸರ್ವರಲ್ಲಿಯೂ ಆದರ, ವಿಶ್ವಾಸ, ಗೌರವಗಳನ್ನಿರಿಸಿ ಮನ್ನಿಸುವುದು ಸರ್ವಸಮತಾಭಾವವೆನಿಸುವುದು. ಈ ವಿಧವಾದ ಭಾವನಾಶುದ್ಧಿಯುಂಟಾದವರು ತಮಗೆ ಯಾರಾದರೂ ಬಂದುವೇಳೆ ಕಷ್ಟ

ನಷ್ಟಗಳನ್ನುಂಟುಮಾಡಿದರೂ ಅವರಲ್ಲಿ ಆಗ್ರಹವನ್ನು ಹೊಂದದೆ, ಅಹಿತ ವನ್ನು ಕೋರದೆ ಕೇವಲ ಕ್ಷಮಾಗುಣದಿಂದ ಅವರ ದೋಷಗಳನ್ನು ಮನ್ನಿಸಿ ತಮ್ಮ ಆತ್ಮೀಯರನ್ನು ನೋಡುವಂತೆ ಅವರಿಗೆ ವಿಹಿತವನ್ನೇ ಬೋಧಿಸುತ್ತ ಬರುವರು. ಅವರಲ್ಲಿ ಅವ್ಯಾಜವಾದ ಸೌಭ್ರಾತೃತ್ವ ಅಥವಾ ಸೌಹಾರ್ದ್ರ ವುಳ್ಳವರಾಗಿ ತಪಸ್ವಿಗಳೆನ್ನಿಸುವರು.

೯. **ಅಚಲಭಕ್ತಿ**—ಮೇಲಿನ ಭಾವನಾಶುದ್ಧಿಯಿಂದ ಮನಸ್ಸು ಪ್ರಸನ್ನವಾಗಿ, ತನ್ನ ನಿರುಪಮವಾದ ಆನಂದಕ್ಕೆ ಮೂಲಕಾರಣಗಳಾದ ವಸ್ತುಗಳಲ್ಲಿ ಅಚಂಚಲವೂ ಅಕೃತ್ರಿಮವೂ ಅಚ್ಛೇದ್ಯವೂ ಆದ ಪ್ರೇಮವನ್ನು ತಳೆಯುವುದು. ಈ ಪ್ರೇಮವು ಪೂಜ್ಯಬುದ್ಧಿಯೊಡನೆ ಕೂಡಿರುವುದರಿಂದ 'ಭಕ್ತಿ'ಯೆನಿಸುವುದು. ಹೀಗೆ ಉಂಟಾದ ಭಕ್ತಿಯು, ಮೊದಲು ತನ್ನ ಜನ್ಮದಾತೆಯಾದ ಜನನಿಯ ವಿಷಯದಲ್ಲಿಯೂ, ಆಬಳಿಕ ಜನ್ಮಭೂಮಿ ಯಲ್ಲಿಯೂ ಉಂಟಾಗುವುದು. ಮಾತೃಭಕ್ತರಿಗೆ "ಮಾತೆಗೆ ಮಿಗಿಲಾದ ವಸ್ತುವಿನ್ನಿಲ್ಲ; ಸಮಸ್ತ ದೈವದಲ್ಲಿಯೂ ಮಾತೆಯೇ ಪೂಜ್ಯ ದೈವವು" ಎಂಬ ಏಕನಿಷ್ಠೆಯು ಅವರಲ್ಲಿ ಸರ್ವದಾ ಇರುವುದು. ಇದರಿಂದ 'ಈ ಸಮಸ್ತ ಋಣಗಳನ್ನೂ ತೀರಿಸಬಹುದು, ಆದರೆ ಜನ್ಮದಾತೆಯ ಋಣವನ್ನು ತೀರಿ ಸುವದರಿದು ; ಆದುದರಿಂದ ಸರ್ವ ಪ್ರಯತ್ನದಿಂದಲೂ ಆ ಮಾತೆಯ ಋಣ ವನ್ನು ತೀರಿಸುವ ಪ್ರಯತ್ನಮಾಡುವುದು ನನ್ನ ಕರ್ತವ್ಯವು' ಎಂಬ ವಿಚಾರವುಂಟಾಗಿ, ಮಾತೆಗೆ ಸಂತೋಷವುಂಟಾಗುವ ಉತ್ತಮ ಕಾರ್ಯ ಗಳನ್ನು ಮಾಡಲು ಉತ್ಸಾಹ ಹೊಂದುವರು. ಮಾತೆಯ ಮನಸ್ಸಿಗೆ ಅಹಿತವಾಗದಂತೆ ತನ್ನ ಒಡಹುಟ್ಟಿದವರಲ್ಲಿ ಪ್ರೇಮ ಆದರಗಳುಳ್ಳವರಾಗಿ ನಡೆಯುವರು. ಮೊದಲು ತನ್ನನ್ನು ಹಡೆದ ತಾಯಲ್ಲಿ ತೋರುವ ಭಕ್ತಿಯೇ ಮುಂದೆ ಬರುತ್ತ ತಾಯ್ನಾಡಿನ (ಜನ್ಮಭೂಮಿ) ವಿಷಯದಲ್ಲಿಯೂ ಉತ್ಪನ್ನ ವಾಗುವುದು. ಅದರಿಂದ ದೇಶಮಾತೆಯ ಹಿತಕ್ಕಾಗಿ ದೇಶೀಯರನ್ನೂ, ಸ್ವಕೀಯ-ಸೋದರಭಾವದಿಂದ ನೋಡುವ ಮನಸ್ಸಾಗಿ ಅವರೊಡನೆ ಸೇರಿ ಸೌಹಾರ್ದ್ರದಿಂದಲೂ ಶಾಂತಭಾವದಿಂದಲೂ ಏಕಮತ್ಯದಿಂದಲೂ ದೇಶ ಹಿತ ಕಾರ್ಯಗಳನ್ನು ಮಾಡುವ ಉತ್ಸಾಹಶಕ್ತಿಯುಂಟಾಗುವುದು. ಇದು ಸಿದ್ಧಿಹೊಂದಿದ ಮೇಲೆ ಈ ಭಕ್ತಿಯು ಸರ್ವೇಶ್ವರನ ಸ್ಥಿತಿಕರ್ತೃತ್ವದ

ದಯಾರಸವನ್ನು ಕುರಿತು, ಮುಂದೆ ಸಾಗಿ ಆ ದಯೆಗೆ ಪಾತ್ರವಾಗಲು ಪ್ರಯತ್ನಹೊಂದುವುದು.

**೧೦. ಸರ್ವೇಶ್ವರ ಸೇವಾ**—ಮೇಲೆ ವರ್ಣಿಸಲ್ಪಟ್ಟ ಪರವಶತೆಯಿಂದ ಮನಸ್ಸು ಭಗವಂತನ ಗುಣಾನುಭವಮಾಡಿಕೊಳ್ಳುವುದರಲ್ಲಿ ಸ್ವಸ್ಥವಾಗಿರುವುದು. ಆಗ ಯಾವಾಗಲೂ ಭಗವದ್ಗುಣಕಥನ, ರೂಪಚಿಂತನ, ಮಹಿಮಾ ವರ್ಣನ, ಚರಿತ್ರ ಶ್ರವಣಗಳಲ್ಲಿಯೇ ಇರುವುದರಿಂದ ನಿರತಿಶಯವಾದ, ವಿವರಿಸಲು ಅಸಾಧ್ಯವಾದ ಆನಂದವನ್ನು ಅನುಭವಿಸುತ್ತ ಗೋಚರಿಸಿದ ವಸ್ತುಗಳಲ್ಲೆಲ್ಲಾ ಪರಮಾತ್ಮನ ವ್ಯಾಪನೆಯನ್ನು ಸ್ಮರಿಸಿ ಸಂಭಾವಿಸುತ್ತ ನಿತ್ಯಮುಕ್ತನಂತೆ ಸುಖಿಯಾಗಿರುವಂತಾಗುವನು. ಇಂತಹ ತಪಸ್ಸಿದ್ಧಿಯನ್ನು ಹೊಂದಿದವರೇ ಸಿದ್ಧಪುರುಷರು, ಬ್ರಹ್ಮಜ್ಞಾನವೇತ್ತರು ಮತ್ತು ಪರತತ್ತ್ವವನ್ನು ತಿಳಿದ ಯೋಗಿಗಳು! ಇಂತಹ ಮಹಾತ್ಮರಿಗೆ ಮತ್ತಾವ ಕಾಮನೆಯೂ ಇರಲಾರದು. ಸ್ವರ್ಗಾದಿ ಸುಖಗಳು ಕೂಡ ಬೇಕಾಗುವುದಿಲ್ಲ. ಎಲ್ಲೆಲ್ಲಿ ನೋಡಿದರೂ ಇವರಿಗೆ ಆನಂದ-ಉತ್ಸಾಹಾಭಿವರ್ಧಕಗಳಾದ ಪರಮಾತ್ಮನ ಸ್ವರೂಪವೇ ಗೋಚರಿಸುವಂತಾಗುವುದರಿಂದ ಸಚ್ಚಿದಾನಂದ ಸುಖಾನುಭವಮಾಡುತ್ತಲಿರುವಂತಾಗುವುದು. ಇಂತಹ ಸಿದ್ಧಪುರುಷರಿಗೆ ನಮ್ಮ ಅನಂತಾನಂತ ಪ್ರಣಾಮಗಳು; ಧನ್ಯವಾದಗಳು!

ಮೇಲೆ ಹೇಳಿದ ಹತ್ತು ವಿಧ ಯೋಗಗಳಿಗೂ ಆಧಾರವಾದ ವಿದ್ಯೆಯನ್ನು ಪಡೆಯಲು ನಾವು ಸರ್ವಪ್ರಕಾರದಿಂದಲೂ ಪ್ರಯತ್ನಪಡಬೇಕು. ವಿದ್ಯೆಯೆಂದರೆ ಓದು ಬರೆಹ, ಮಾತ್ರವಲ್ಲವೆಂದೂ ಕುಶಲಕಲೆಗಳನ್ನು ಬೋಧಿಸುವ ಪುಸ್ತಕ ಪಠನದಿಂದ ವಿದ್ಯಾಭ್ಯಾಸಮಾಡಿದಂತಾಗಲಿಲ್ಲವೆಂದೂ ಸ್ವರೂಪ, ಕರ್ತವ್ಯ, ಧರ್ಮ, ಧ್ಯೇಯಗಳನ್ನು ಬೋಧಿಸುವ ವಿವೇಕ-ಪ್ರಜ್ಞೆಯೇ ವಿದ್ಯೆಯೆಂದೂ ಹಿಂದೆ ಹೇಳಿರುವುದು. ಮತ್ತು ಈ ವಿವೇಕ ಲಾಭಕ್ಕೆ ಶಿಕ್ಷಣ—ಅಭ್ಯಾಸಗಳ ಕ್ರಮವೆಂತಹದೆಂಬುದನ್ನು ತಕ್ಕಮಟ್ಟಿಗೆ ಹೇಳಿರುವುದು. ದೇಶಭಕ್ತರಾದ ನಮ್ಮ ಬಾಂಧವರು ನಮ್ಮ ದೇಶೀಯ ಸೋದರಿಯರ ಜ್ಞಾನಾಭಿವೃದ್ಧಿಗಾಗಿ ಅನೇಕ ವಿಧ ಪ್ರಯತ್ನಗಳನ್ನು ಕೈಕೊಂಡಿರುವರಾದರೂ ಇನ್ನೂ ಅವರ ಪ್ರಯತ್ನವು ಕ್ರಮಪಡದೆ, ಫಲರೂಪಕ್ಕೆ ಬಾರದೆ ಅನೇಕ ಅಭ್ಯಂತರಗಳಿಂದ ಕೆಟ್ಟುಹೋಗುತ್ತಲಿರುವುದು.

ನಮ್ಮ ಸೋದರಿಯರು, ಕೋಮಲ ಹೃದಯರಾದ, ಪ್ರಜ್ಞಾವತಿಯರಾದ ಆರ್ಯನಾರೀಮಣಿಯರು, ಇನ್ನಾದರೂ ತಮ್ಮ ಇತರ ಸೋದರಿಯರ ಅಜ್ಞಾನಾಭಿಮಾನಾದಿಗಳಿಂದ ದೇಶಮಾತೆಗೆ ಉಂಟಾಗಿರುವ ದುರ್ದಶೆಯನ್ನು ಹೋಗಲಾಡಿಸಿ ಮಾತೃಋಣವನ್ನು ಸಾಧ್ಯವಾದಮಟ್ಟಿಗಾದರೂ ಸಲ್ಲಿಸಲು ಪ್ರಯತ್ನಪಡುವುದು ಕರ್ತವ್ಯ ಧರ್ಮವು!

---

## III

## ದೌರ್ಜನ್ಯ-ದೌರ್ಭಾಗ್ಯಗಳಿಂದ ದೇಶಕ್ಕಾಗಿರುವ ದುಃಸ್ಥಿತಿ

ನಮ್ಮವರ ದೌರ್ಜನ್ಯದ ದೆಸೆಯಿಂದ ನಮ್ಮ ದೇಶಮಾತೆಗುಂಟಾಗಿರುವ ದುರ್ದಶೆಯನ್ನು ಹೋಗಲಾಡಿಸುವುದು ನಮ್ಮ ಧರ್ಮ ಕರ್ತವ್ಯವೆಂದು ಹಿಂದೆ ಹೇಳಿದೆವು. ಆದರೆ ನಾವು ಮಾಡಿದ ಅಪಚಾರವೇನು? ನಮ್ಮಲ್ಲಿ ಕಂಡ ದೌರ್ಜನ್ಯವೆಂತಹದು? ನಮ್ಮಿಂದ ದೇಶಕ್ಕಾಗಿರುವ ದುರ್ಗತಿಯು ತಾನೇ ಅದಾವುದು? "ಏನಾದರೂ ಇಲ್ಲದುದೊಂದು ಸುಳ್ಳನ್ನು ಹೇಳಿ ಕಲ್ಲೊಗೆಯಬೇಕೆಂಬುದು ಅಲ್ಲದ-ಸಲ್ಲದ ಕೆಲಸವಲ್ಲವೇ?" ಎಂದು ನಮ್ಮ ಸೋದರಿಯರು ನಮ್ಮನ್ನು ಆಕ್ಷೇಪಿಸಬಹುದು. ಆದರೆ ಅದನ್ನಿಲ್ಲಿ ಸ್ವಲ್ಪ ವಿವರಿಸಿ ಹೇಳಿದರೆ ಆಗಲಾದರೂ ಶಾಂತರಾಗುವರೋ ಅಥವಾ—"ಕಂಡುದನಾಡಿದರೆ ಕೆಂಡದಂತಾಗುವರು" ಎಂಬಂತೆ ರೋಷಾವೇಶದಿಂದ ಶಪಿಸುವರೋ ತಿಳಿಯಲಾರೆವು. ಹಾಗೆ ಒಂದುವೇಳೆ ಅವರು ಶಪಿಸುವರಾದರೂ ಅದೇ ಪರಮಾನುಗ್ರಹವೆಂದು ಭಾವಿಸಿ ನಮ್ಮ ಕೆಲಸವನ್ನು ಪೂರ್ಣಗೊಳಿಸಬೇಕಾದುದು ನಮ್ಮ ಧರ್ಮವಾಗಿದೆ.

ಪ್ರಿಯ ಸೋದರಿಯರೇ! ನಮ್ಮ ಸ್ತ್ರೀ ಜಾತಿಗೆ ಸಹಜ ಶೋಭಾರಾಶಿಯೆನಿಸುವಂತೆ ಸೃಷ್ಟಿಕರ್ತನಿಂದ ಅನುಗ್ರಹದತ್ತವಾಗಿರುವುವೆಂದು ಈವರೆಗೆ ಪ್ರಸಿದ್ಧಿಹೊಂದಿದ್ದ ವಿನಯ, ಗಾಂಭೀರ್ಯ, ಮಾಧುರ್ಯ, ಕ್ಷಮಾ, ಶ್ರಮಸಹಿಷ್ಣುತಾ, ಕರ್ತವ್ಯಕ್ಷಮತಾ ಮೊದಲಾದ ಕೋಮಲ ಗುಣಗಳೆಲ್ಲವೂ ಈಗ ಎಲ್ಲೆಲ್ಲಿ ಹೋಗಿರುವುವು? ನಮ್ಮವರಲ್ಲಿ ಇಷ್ಟು ಗುಣಗಳೂ ಏಕತ್ರ ಶೋಭಿಸುವಂತೆ ಎಲ್ಲಿ—ಯಾರಲ್ಲಿಯಾದರೂ ಕಂಡುಬರುತ್ತಿರುವುವೇ?

ಒಬ್ಬರಲ್ಲಿ ಒಂದು ಗುಣವಿದ್ದರೆ ಮತ್ತೊಬ್ಬರಲ್ಲಿ ಮತ್ತೊಂದು ಗುಣ ವಿರುವುದು. ಹಾಗೆ ಒಂದು ಅಥವಾ ಎರಡು ಗುಣಗಳಿಗೂ ಅಧಿಕವಾದ ಕೋಮಲ ಗುಣಗಳುಳ್ಳವರು ವಿಶೇಷವಾಗಿದ್ದರೂ ಈ ತರದ ದೌರ್ಜನ್ಯಾವ ವಾದದ ಭೀಕರ ಸ್ವರೂಪವು ಸರ್ವತ್ರ ವ್ಯಾಪಿಸುತ್ತಿರಲಿಲ್ಲ. ಪತಿ ಪುತ್ರರೇ ಮೊದಲಾದ ಸ್ವೀಯ–ಸ್ವಕೀಯರನ್ನು ಉಪಚರಿಸುತ್ತಿದ್ದುದಲ್ಲದೆ ಆಶ್ರಿತಾ ನಾಥರನ್ನೂ ಕೇವಲ ಪುತ್ರವಾತ್ಸಲ್ಯದಿಂದ ಕಾಪಾಡುತ್ತಿದ್ದ ನಮ್ಮ ಹಿರಿಯರ ಪವಿತ್ರ ಪ್ರೇಮವು, ಈಗ ನಮ್ಮವರಲ್ಲಿ ಎಷ್ಟುಮಟ್ಟಿಗೆ ಇರಬಹುದು? ಕೈ ಹಿಡಿದು ತಮಗಾಗಿಯೇ ದುಡಿಯುತ್ತಿರುವ ಪತಿಯ ಹಿತಸಾಧನೆಯಲ್ಲಿಯೇ ಅಲಸರಾಗಿಯೂ ಉದಾಸೀನರಾಗಿಯೂ, ಅಡಿಗಡಿಗೆ ದುರಾಗ್ರಹ, ಅಸಮಾಧಾನಗಳನ್ನು ಹೊಂದುತ್ತಲಿರುವ ನಮ್ಮವರಲ್ಲಿ ದೌರ್ಜನ್ಯವಿನ್ನೆಷ್ಟು ಮಟ್ಟಿಗಿರಬಹುದು? ಒಡಹುಟ್ಟಿದವರಲ್ಲಿಯೇ ಅಸಹನೆಯುಳ್ಳವರಾಗುವ ನಮ್ಮ ಸದ್ಗುಣಕ್ಕೆ ಮೇರೆಯುಂಟೇ? ಒಡಲೊಳಗೆ ಹುಟ್ಟಿದ ಮಕ್ಕಳ ಶಿಕ್ಷಣ ಸಂರಕ್ಷಣಗಳಲ್ಲಿ ಪರಾಙ್ಮುಖರಾಗಿರುವವರು ಮನೆಗೆ ಬಂದವರಾದ ಸೊಸೆಯರನ್ನು ಹೇಗೆ ನೋಡಿಕೊಳ್ಳಬಹುದೋ ಹೇಳಲಾದೀತೇ? ಅತ್ತಿಗೆ ನಾದಿನಿ ಓರಗಿತ್ತಿಯರ ವಿಷಯದಲ್ಲಿಯಂತೂ ನಮ್ಮವರ ಸೌಜನ್ಯವೆಷ್ಟಿದೆ ಯೆಂದು ಹೇಳಬೇಕಾದುದೇ ಇಲ್ಲ. ಇನ್ನು ಸಪತ್ನೀ ಪುತ್ರ–ಪುತ್ರಿಯರು (ಸವತಿಯ ಮಕ್ಕಳು) ಇದ್ದರೆ ಅವರಲ್ಲಿ ಇವರಿಗೆ ಪರಿಪೂರ್ಣಕಟಾಕ್ಷವೇ ಸರಿ! ನಮ್ಮ ದೇಹ, ಅದಕ್ಕೆ ಹೊಂದಿದ ಅವಯವಗಳಂತೆ ನಮಗೆ ಸೇರಿದವ ರನ್ನೂ ಸಮಂಜಸವಾಗಿ ನೋಡಿಕೊಳ್ಳಲಾರದವರಾದ ನಾವು, ನಮ್ಮ ಧರ್ಮ ವನ್ನಾಗಲೀ ಸಮಾಜವನ್ನಾಗಲೀ ಸರಿಯಾಗಿ ನೋಡಿಕೊಳ್ಳುವುದು ಹೇಗೆ? ತಾಯಿಯರೇ! ಕಟಾಕ್ಷಿಸಿರಿ? ನಮ್ಮವರ ಮಾತ್ಸರ್ಯದ ವರ್ಣನೆ, ಹಟ ಶಠತೆಗಳ ವರ್ಣನೆ, ದುರಾಗ್ರಹ–ದುರಭಿಮಾನಗಳ ವರ್ಣನೆ, ನಿರ್ಲಜ್ಜ–ನಿರ್ಘೃಣತೆಗಳ ವರ್ಣನೆ—ಇವುಗಳೇ ಎಲ್ಲೆಲ್ಲಿಯೂ ಘೋರ್ಗರೆಯುತ್ತ ಕಿವಿಗಳನ್ನು ಕಿವುಡಾಗುವಂತೆ ಮಾಡುತ್ತಿವೆ. ಒಬ್ಬರಲ್ಲಿ ಒಂದು ದುರ್ನಡತೆ ಯನ್ನು ಕಂಡರೆ ಆ ಕೂಡಲೇ—'ಹಾಳು ಹೆಂಗಸರು–ಕೆಟ್ಟಜಾತಿಯವರು, ದುರ್ಗುಣಕ್ಕೆ ತವರ್ಮನೆ' ಎಂಬ ದೋಷಾರೋಪವು ಸ್ತ್ರೀವರ್ಗದ ಮೇಲೆಲ್ಲಾ ಬೀಳುವುದು. ಹೀಗಾಯಿತೇಕೆ? ನಾವು ವಿವೇಚನಾಶಕ್ತಿ

ಯನ್ನು ಕಳೆದುಕೊಂಡು ಮೂಢಬುದ್ಧಿಯವರಾಗಿರುವುದರಿಂದಲ್ಲವೇ ನಮ್ಮ ಮೇಲೆ ಅಂತಹ ಸಿಡಿಲುಗಳು ಬೀಳುತ್ತಿರುವುವು. ವಿಚಾರಶಕ್ತಿಯು ನಮ್ಮಲ್ಲಿದ್ದು ನಮ್ಮ ದೇಹಧರ್ಮ-ಮನೋಧರ್ಮಕ್ಕೆ ವಿರೋಧವಾದ ಆಚಾರ ವಿಚಾರಗಳಾವುವೆಂಬುದನ್ನು ವಿವೇಚಿಸಿ, ಅಂತಹ ಅನೀತಿಕರವಾದ-ಅಹಿತವಾದ ಕಾರ್ಯಗಳನ್ನು ನಮ್ಮವರಾರೂ ಮಾಡದಂತೆ ಐಕಮತ್ಯದಿಂದ ಕಟ್ಟುಮಾಡಿ ನಡೆದುಕೊಳ್ಳುವ ಶೀಲವು ನಮ್ಮಲ್ಲಿದ್ದರೆ ನಮ್ಮ ದೇಶದಲ್ಲಿ ಕಲಹ, ಪೀಡೆ, ಕೊಲೆ, ವಂಚನೆ, ಅತೃಪ್ತಿ, ಹಾಹಾಕಾರಗಳು ಇಷ್ಟು ಪರಿಯಾಗಿ, ದೇಶವು ಅಂತಸ್ತಾಪಕ್ಕೆ ಗುರಿಯಾಗುತ್ತಿರಲಿಲ್ಲ. ಇವೆಲ್ಲಕ್ಕೂ ಕಾರಣರಾರು? ಯಾರ ದೌರ್ಜನ್ಯದಿಂದ ದೇಶಮಾತೆ ಹಣ್ಣಾಗಿರುವಳು? ಮತ್ತಾರೂ ಅಲ್ಲ, ಕಾರಣರು ನಾವೇ. ನಮ್ಮ ದೌರ್ಜನ್ಯವೇ! ಹೇ ತಾಯಿ, ಆರ್ಯಭೂಮಾತೆ! ನಿನ್ನ ಮೊದಲಿನ ಸಂಪತ್ತು-ವೈಭವ, ಸೌಕುಮಾರ್ಯ, ಶೋಭಾರಾಶಿ—ಇವೆಲ್ಲವೂ ಈಗ ಎಲ್ಲಿರುವುವು? ಲಾವಣ್ಯಮಯವಾದ ನಿನ್ನ ವದನೇಂದುಮಂಡಲದ ಕಾಂತಿ ಈಗ ಕಾಣುತ್ತಲಿಲ್ಲವೇಕೆ? ಕಳೆಗುಂದಿದ ಮುಖ, ಸುಕ್ಕುಹಿಡಿದ ಹಣೆ, ನಿಸ್ತೇಜವಾದ ಕಣ್ಣುಗಳು, ಕೃಶವಾದ ದೇಹ, ನಿಟ್ಟುಸಿರು ಬಿಡುವ ವ್ಯಾಕುಲಭಾವ— ಇವೆಲ್ಲಾ ಉಂಟಾಗಿರಲು ಹೇತುವೇನು? ಹೇಳು, ಜನನಿ! ದಯಾಮಯಿ, ಈ ನಿನ್ನ ಅಣುಮಾತ್ರದ ಕಂದನಲ್ಲಿ ಒಂದಿಷ್ಟು ಹೇಳು? ಏತರಿಂದ ಹೀಗಾಗಿರುವೆ? ಏಕೆ ಮಾತಿಲ್ಲ? ಆಡಲೊಲ್ಲೆಯಾ? ಹೇಳಿದರೂ ಗ್ರಹಿಸಲಾರೆನೆಂದು ಹೇಳದಿರುವೆಯೋ? ಅಥವಾ ಹೇಳಿ ಫಲವೇನೆಂದು ಉದಾಸೀನದಿಂದಿರುವೆಯೋ? ಹೀಗೇಕೆ ಖಿನ್ನಳಾಗಿರುವೆಯೋ?

"ಸಂಪದವು ಸೂರೆಯಾಯ್ತು, ವೈಭವವು ಮರೆಯಾಯ್ತು, ಸೌಕುಮಾರ್ಯವು ಚಿಂತಾಶೋಕಗಳಿಂಗ ಗ್ರಾಸವಾಯಿತು. ಶುಭ ವಿಭವಗಳಿಲ್ಲದೆ, ಶೋಭಾರಾಶಿಯೂ ಕುಂದಿಹೋಯಿತು. ಹೇಳುವುದಿನ್ನೇನು? ದಾರಿದ್ರ್ಯ ದುಃಖಗಳು ಹೆಚ್ಚಿದುವು. ಪುತ್ರರು ಗಳಿಸುವ ಶಕ್ತಿಯಿಲ್ಲದೆ ಉದ್ಯೋಗ-ಕೃಷಿಗಳನ್ನು ಒಲ್ಲದೆ, ಹಿಂದಿನವರು ಗಳಿಸಿದ್ದುದನ್ನು ಮನಬಂದಂತೆ ವೆಚ್ಚ ಮಾಡುತ್ತ ಬಡತನಕ್ಕೆ ಗುರಿಯಾದರು; ಉದ್ಯೋಗಮಾಡುವೆವೆಂಬುವರು ಹದ್ದುಮೀರಿ ನಡೆದು ದಾರಿದ್ರ್ಯ ದೇವತೆಗೆ ಅತಿಥಿಯಾದರು. ಹೆಣ್ಣುಮಕ್ಕಳು

ಅಲಂಕಾರಪ್ರಿಯರಾದರು. ಆಯವ್ಯಯಗಳ ಮರ್ಮವರಿಯದೆ ಮಿತಿಮೀರಿ ತಿಂದುಂಡು ಸೋಮಾರಿಗಳಾಗಿ ನಿದ್ರಾಲಸ್ಯಾದಿಗಳಿಂದ ಕಾಲಹರಣ ಮಾಡುತ್ತಲಿರುವರು. ಕರ್ಮಕ್ಷಮತೆ ಕುಗ್ಗಿತು, ಧರ್ಮಶ್ರದ್ಧೆ ಮಾಯ ವಾಯ್ತು, ಕಾರ್ಯದಕ್ಷತೆ ಇಲ್ಲವಾಯಿತು. ಸ್ವಾತಂತ್ರ್ಯವನ್ನು ಕಳೆದು ಕೊಂಡು, ಆತ್ಮಗೌರವವನ್ನುಳಿದು ಪರಾಧೀನ ಚಕ್ರವೇಗಕ್ಕೆ ಬಲಿಬಿದ್ದು, ನನ್ನ ಸಂತಾನವೆಲ್ಲವೂ ನಿಸ್ಸತ್ವವಾಗುವ ಸ್ಥಿತಿ ಬಂದಿತು. ಕೀರ್ತಿಶೇಷ ರಾಗಿರುವ ನನ್ನ ಪುತ್ರರತ್ನನಿಚಯವನ್ನೂ ದುಹಿತಾ ಸಂತತಿಯನ್ನೂ ಸ್ಮರಿಸಿ, ಅವರು ನನ್ನಲ್ಲಿ ತೋರಿಸುತ್ತಲಿದ್ದ ಪ್ರೀತಿ ಅಭಿಮಾನ ಗೌರವ ಮೊದಲಾದ ಸ್ವರ್ಗೀಯ ಗುಣಗಳನ್ನು ನೆನೆದು, ಜಗತ್ತಿಗೆಲ್ಲಾ ಕೌತುಕ ವುಂಟುಮಾಡುವಂತಹ ಘನತೆಗೆ ನನ್ನನ್ನು ತಂದು ನಿಲಿಸಿದ್ದ ಅವರ ಸಾಹಸ, ಸತ್ಸಂಕಲ್ಪ, ಸತತೋದ್ಯಮಗಳನ್ನು ಜ್ಞಾಪಿಸಿಕೊಂಡು, ಈಗಿನ ನನ್ನ ಸಂತಾನದ ಬಡತನ, ಮೂರ್ಖತನ, ಉದಾಸೀನ, ಪರಾಧೀನ—ಮೊದಲಾದ ದುರ್ಗುಣಗಳನ್ನೂ ಅದರಿಂದ ಅವರಿಗಾಗಿರುವ ಬಹು ವಿಧದ ರೋಗಗಳನ್ನೂ ಆಯುಃಕ್ಷೀಣತೆಯನ್ನೂ ಈಗಿನವರ ದುರ್ಬಲತೆಯನ್ನೂ ನೋಡಿ ಆಗುವ ಅಂತಸ್ತಾಪ, ಇವರ ಬಲಹೀನತೆಯನ್ನು ಕಂಡು ನಾನಾಕಡೆಯಿಂದಲೂ ದಂಡೆತ್ತಿಬಂದು ಇವರನ್ನು ಕಟ್ಟಿಹಾಕಿ, ನನ್ನ ಸರ್ವಸ್ವವನ್ನೂ ಸೂರೆಗೊಳ್ಳ ಬೇಕೆಂದು ಸಾಹಸಪಡುತ್ತಿರುವ ಅರಿಗಳ ಕ್ರೂರವ್ಯಾಪಾರವನ್ನು ನೋಡಿ ಆಗುವ ದುಃಖ—ಇವೆಲ್ಲವನ್ನೂ ಹೇಗೆ ಸಹಿಸಬೇಕು?" ಎಂದು ಕೇಳು ವೆಯಾ?

ಅಮ್ಮಾ! ನಿನ್ನ ಮಾತು ದಿಟ. ಮಾತೆಯ ಕ್ಷೇಮಲಾಭವನ್ನೇ ಕುರಿತು ಅನವರತವೂ ಚಿಂತಿಸುತ್ತ ಅವಳ ಮನಸ್ಸಂತೋಷವಾಗುವಂತೆ ನಡೆಯಬೇಕಾದುದು ಹೆಣ್ಣುಮಕ್ಕಳ ಧರ್ಮವು ಮಾತ್ರವಲ್ಲ—ಕರ್ತವ್ಯ ಕರ್ಮವು. ಅಂತಹ ನಿನ್ನೀ ಸುತೆಯರು ನಿನ್ನನ್ನು ಉಪೇಕ್ಷಿಸಿ ಕ್ಷಣಿಕ ಸುಖಕ್ಕೆ ಆಶೆಪಟ್ಟು ನಶ್ವರಸಂಪದ್ವೈಭವಗಳಲ್ಲಿ ಬೆರೆದು, ಬೀಗಿ, ಗುರು ಹಿರಿಯರನ್ನು ನಿಂದಿಸಿ ಪೂರ್ವಜರ ಪವಿತ್ರ ಚರಿತ್ರಗಳ ಕಥನಮಾಡದೆ ಕಾಡು ಕಥೆಗಳನ್ನು ಕೇಳಿ ಹಿಗ್ಗಿ ಹೆರವರಂತೆ ನಡೆಯಲು ತೊಡಗಿ, ರೀತಿನೀತಿ ಗಳನ್ನು ಮರೆತು, ಸ್ತ್ರೀಜನೋಚಿತವಾದ ಕೋಮಲ ಗುಣಗಳನ್ನೇ ಕಳೆದು

ಕೊಂಡು ಸರ್ವರಿಂದಲೂ ಅಪಹಾಸಮಾಡಿಸಿಕೊಳ್ಳುವಂತಹ ಹೀನಸ್ಥಿತಿಗೆ ಬಂದಿರುವರು! ಪುರುಷರು ಆರ್ಜಿಸುವುದೂ ಪುರುಷರು ಶ್ರಮಪಟ್ಟು ಆರ್ಜಿಸಿದುದನ್ನು ಸ್ತ್ರೀಯರು ಊರ್ಜಿತಪಡಿಸುವುದೂ ತಮ್ಮ ಪಾಲಿನ ಕೆಲಸವೆಂಬುದನ್ನು ನಿನ್ನೀ ಪುತ್ರಿಯರು ಮರೆತಿರುವುದರಿಂದ ನಿನ್ನ ಕೋಶಾಗಾರವೆಲ್ಲಾ ಬರಿದಾಗುವಂತಾಯಿತು. ಸತಿಯರ ಸಮಯೋಚಿತ ಸಲಹೆ, ಪ್ರೋತ್ಸಾಹ, ಸಹಾಯಗಳು ದೊರೆಯದುದರಿಂದ ನಿನ್ನ ಪುತ್ರರೂ ಆರ್ಜಿಸುವುದರಲ್ಲಿ ಅಷ್ಟಾಗಿ ಆಸಕ್ತಿಯುಳ್ಳವರಾಗಿಲ್ಲ. ಆರ್ಜಿಸಿದ ಅಲ್ಪ ಸ್ವಲ್ಪವೂ ಕ್ಷುಲ್ಲಕ ವಿನೋದಗಳಿಗಾಗಿಯೇ ವೆಚ್ಚವಾಗಿ ಹೋಗುವುದು. ಹೀಗಾಗಿ ಸರ್ವಪ್ರಕಾರದಿಂದಲೂ ನಿನ್ನ ಸ್ಥಿತಿಯು, ನಿನ್ನ ಅಂತಸ್ಸ್ಥಿತಿಯು ಪರಿತಾಪಜನಕವಾಗಿಯೇ ಕಾಣುವುದು. ನಿನ್ನೀ ಸ್ಥಿತಿಯನ್ನು ಕ್ರಮಪಡಿಸುವ ಮಾರ್ಗವಾವುದು? ಮಾಡುವ ಪುಣ್ಯಾತ್ಮರಾರು? ನಿನ್ನ ಶೋಕನಿವಾರಣಕ್ಕಾಗಿ, ನಿನ್ನ ಸ್ವಾತಂತ್ರ್ಯ ಸಂರಕ್ಷಣಕ್ಕಾಗಿ, ನಿನ್ನ ಅತುಲೈಶ್ವರ್ಯ ಸಮನ್ವಿತವಾದ ಭಂಡಾರವನ್ನು ಕಾಪಾಡುವುದಕ್ಕಾಗಿ, ನಿನ್ನ ಮಹಿಮಾಪ್ರಕಾಶನಕ್ಕಾಗಿ, ತಮ್ಮ ತನುಮನೋಧರ್ಮಗಳನ್ನು ಅರ್ಪಿಸಿ, ಉದ್ದೇಶಸಿದ್ಧಿಹೊಂದಲು ನಿಶ್ಚಯಬುದ್ಧಿಯುಳ್ಳ ಮಹಾತ್ಮರಾರಾದರೂ ಕಂಕಣ ಕಟ್ಟಿ ನಿಂತಿರುವರೇ? ಹಾಗಿದ್ದರೆ ಅವರಿಗೆ ನನ್ನ ಅಭಿವಂದನಗಳು!

---

## IV

## ದೈನ್ಯ ಪ್ರಾರ್ಥನೆ

ಉದಾರ ಬುದ್ಧಿಯುಳ್ಳ ಆರ್ಯ ಭ್ರಾತೃ ಬಾಂಧವರೇ! ವಿಚಾರ ಮಾಡುತ್ತಿರುವುದೇನು? ದೇಶಮಾತೆಯ ಸದ್ಯಃಸ್ಥಿತಿಯನ್ನು ಕುರಿತೋ? ಕುಳಿತಲ್ಲಿ ಕುಳಿತು ಕಳೆಗುಂದಿ, ಕಣ್ಣೀರು ಸುರಿಸುತ್ತ, ನಿಟ್ಟುಸಿರು ಬಿಡುತ್ತ ಪರಿಪರಿಯಿಂದ ಹಲುಬುತ್ತ ಎಷ್ಟುಕಾಲ ಹೀಗೆ ಕಳವಳಿಸುತ್ತಿದ್ದರೆ ಸರಿಯಾದೀತು? ಉದಾತ್ತಭಾವನೆಯಿಂದ, ಅಸಮಾನ ತೇಜಸ್ಸಿನಿಂದ, ನಿರತಿಶಯ ವಿದ್ಯಾಬುದ್ಧಿಗಳಿಂದ, ಅಪರಿಮಿತ ಸಾಹಸೌದಾರ್ಯಗಳಿಂದ, ಅಮೋಘವಾದ ಸತ್ಯಶೌಚಾದಿಗಳಿಂದ, ಅತುಲೈಶ್ವರ್ಯದಿಂದ, ದಿಗಂತ

ವಿಶ್ರಾಂತ ಕೀರ್ತಿಯಿಂದ ವಿರಾಜಮಾನವಾಗಿದ್ದ ನಮ್ಮ ಆರ್ಯಭೂಮಿಯು ಈಪರಿ ಜೀರ್ಣಾವಸ್ಥೆಗೆ ಬಂದಿರುವುದೆಂದು ಕುಳಿತು ಚಿಂತಿಸಿದರೆ ಜೀರ್ಣೋದ್ಧಾರಮಾಡಿದಂತಾಗುವುದೇ? ಏಳಿರಿ, ನೀವು ಎದ್ದು ಮುಂದೆ ಬಂದು ನಿಲ್ಲದೆ, ನಿಮ್ಮ ಇತರ ಸಹಜಾಗ್ರಜರು ಏಳುವರಲ್ಲ; ಏಕೆ ವಿಳಂಬಿಸುವಿರಿ? ನಿಮ್ಮ ಬಾಹುಗಳಲ್ಲಿ ಬಲವಿಲ್ಲವೇ? ಮನಸ್ಸಿನಲ್ಲಿ ಧೈರ್ಯವಿಲ್ಲವೇ? ಬುದ್ಧಿಯೊಡನೆ ಕುಶಲತೆಯೂ, ಜ್ಞಾನದೊಡನೆ ಉತ್ಸಾಹವೂ ಇದೆಯೋ ಇಲ್ಲವೋ? ಹಾಗಿರುವುದಾದರೆ ಎದ್ದು ನಿಂತು, ಸಂಕಲ್ಪ ಮಾಡಿ, ಕಂಕಣವನ್ನು ಕಟ್ಟಿಕೊಂಡು ಕಾರ್ಯಕ್ಕೆ ಕೈಚಾಚಿರಿ? ಏನು ಹೇಳುವಿರಿ?

"ನಾವೇನು ಮಾಡುವ? ನಮ್ಮ ದೇಶದ ಈಗಿನ ಪರಿಸ್ಥಿತಿಗೆ ಕಾರಣರು ಸ್ತ್ರೀಯರು! ಆದುದರಿಂದ ಅವರೇ ಮಾತ್ರ ಹೃತ್ತಾಪನಿವಾರಣಕ್ಕಾಗಿ ಮುಂದೆ ಬಂದು ನಿಲ್ಲಬೇಕು? ಹಾಗೆ ಅವರು ನಿಲ್ಲುವವರೆಗೂ ನಮ್ಮ ಪ್ರಯತ್ನಗಳೇನೂ ಸಾಗಲಾರವು. ನಮ್ಮ ಶಕ್ತಿಮೀರಿ ಸಾಹಸಪಟ್ಟೆವು, ಯೋಗ್ಯತೆಗೆ ಮೀರಿದಷ್ಟು ವೆಚ್ಚಮಾಡಿದೆವು. ಆದರೂ ಸೋದರಿಯರ ನಿದ್ರಾಜಡತೆಯಿನ್ನೂ ಪರಿಹಾರವಾಗಿಲ್ಲ. ಮಾತೆಯ ಕ್ಷೇಮಾಭ್ಯುದಯ ಚಿಂತನೆಯಲ್ಲಿ ಯಾರು ವಿಶೇಷವಾಗಿ ಭಾಗವನ್ನು ವಹಿಸಬೇಕೋ ಅವರೇ– ಆ ನಮ್ಮ ಆರ್ಯ ಸೋದರಿಯರೇ ಇನ್ನೂ ಗಾಢನಿದ್ರಾಪರವಶರಾಗಿರುವರು. ಇಂಥವರನ್ನು ನಿದ್ರೆಯಿಂದೆಚ್ಚರಗೊಳಿಸಬೇಕೆಂದು ಬಹು ಬಗೆಯಾಗಿ ಎಚ್ಚರಿಕೆ ಕೊಟ್ಟುದಾಯಿತು. ಪತ್ರಿಕಾ ಮುಖದಿಂದ ಬೋಧಿಸಿದುದಾಯಿತು. ಹಲವು ಸೂಚನೆಗಳನ್ನು ಕೊಟ್ಟುದೂ ಆಯಿತು. ಆದರೂ ಇನ್ನೂ ಅವರು ಕಣ್ದೆರೆದು ನೋಡುವರಾಗಿಲ್ಲ. ಕಣ್ದೆರೆದವರೂ ಎದ್ದು ನಿಂತು ಮೈಮುರಿದು ಕೆಲಸಮಾಡುವ ಮನಸ್ಸುಳ್ಳವರಾಗಿಲ್ಲ."

ಹೀಗೆ ಹೇಳುವಿರೇನು? ಬಾಂಧವರೇ! ನಮ್ಮ ಸ್ತ್ರೀವರ್ಗಕ್ಕೆ ಉಂಟಾಗಿರುವ ಹೀನತೆಯನ್ನು ಕುರಿತು ಎಷ್ಟು ಶೋಕಿಸಿದರೂ ಸ್ವಲ್ಪವೇ!

ಸೋದರಿಯರೇ! ಎಷ್ಟೆಷ್ಟು ಪರಿಯಿಂದ ಅವಹೇಳನಮಾಡಿಸಿಕೊಂಡರೂ ಮರುಮಾತಾಡದೆ ನಡೆನೋಡದೆ ಕೆಲಸಕ್ಕೆ ಕೈಹಾಕದೆ ಹೀಗೇಕೆ ಸುಮ್ಮನಿರುವಿರಿ? 'ಅನರ್ಥಕ್ಕೆಲ್ಲಾ ವನಿತೆಯರೇ ಕಾರಣರು' ಎಂದು

ಅನೇಕ ಮುಖದಿಂದ ಅಪವಾದ ಹೊರಿಸುತ್ತಿರುವ ಪುರುಷರು ಮುಂದೆ ಯಾದರೂ ನಾಲಗೆಯನ್ನು ತಡೆದು ಮಾತನಾಡುವಂತೆ ನಮ್ಮ ಸೌಜನ್ಯ, ಸದಸದ್ವಿಚಾರ, ಕರ್ಮಕ್ಷಮತೆಗಳಿಂದ ಅವರಿಗೆ ಎಚ್ಚರಿಕೆಯನ್ನು ಕೊಡುವುದು ನಮ್ಮವರ ಕರ್ತವ್ಯವಲ್ಲವೇ? ವಿಶ್ವಸನೀಯೆಯರಾದ ಸೋದರಿಯರೇ! ಅಪವಾದಕ್ಕಿಂತಲೂ ಭಯಂಕರವಾದ ಆಪತ್ತು ಅಬಲೆಯರಿಗೆ ಬೇರೊಂದಿದೆಯೇ? ಈ ಭೀಕರವಾದ ಅಪವಾದವು ನಮ್ಮ ನಾರೀಜನ್ಮವನ್ನೇ ವ್ಯರ್ಥವೆನ್ನಿಸುವುದಲ್ಲವೇ? ಇದನ್ನು ಕುರಿತು ಇನ್ನಾದರೂ ವಿವೇಕ ಪರಿತಾಪಗಳು ಬೇಡವೇ? ಮಾತೆಗಿಂತಲೂ ಪ್ರೀತಿಪಾತ್ರವಸ್ತು ಮತ್ತೊಂದಿಲ್ಲ. ಆದುದರಿಂದ ಪರಮ ಪ್ರೀತ್ಯಾಸ್ಪದೆಯಾದ ಮಾತೆಯ ಹಿತಕ್ಕಾಗಿ ಏಳಿರಿ, ಮುಂದೆ ಬನ್ನಿರಿ! ಎಂದರೆ 'ಸ್ತ್ರೀಯರಿಗೆ ಉಚಿತವಾದ ಸ್ವಾಮಿ ಸೇವೆಯನ್ನೂ, ಗೃಹಿಣೀ ಧರ್ಮಕ್ಕೊಳಪಟ್ಟ ಗೃಹಕಾರ್ಯಭಾಗ' ವನ್ನೂ ಬಿಟ್ಟುಬರಬೇಕೆಂದು ಹೇಳಿದಂತೆ ಭಾವಿಸಬೇಡಿರಿ. ಗೃಹಕಾರ್ಯ ನಿರ್ವಹಣದಲ್ಲಿ ವಿಶೇಷ ಜಾಗರೂಕತೆ, ದಕ್ಷತೆ, ಉತ್ಸಾಹಗಳೂ ಸ್ವಾಮಿ ಸೇವೆಯಲ್ಲಿ ಶ್ರದ್ಧೆ, ವಿಶ್ವಾಸ, ನಿರಲಸತೆಗಳೂ, ಪುತ್ರ ಪರಿವಾರ ವರ್ಗಕ್ಕೆ ಸೇರಿದವರ ಪರಿಪೋಷಣ ವಿಚಾರಗಳಲ್ಲಿ ವಿತರಣೆ, ಹಿತಚಿಂತನೆಗಳೂ ನಿಮ್ಮಲ್ಲಿ ಇತೋಪ್ಯತಿಶಯವಾಗಿ ಬೆಳಸುತ್ತ ಬರಬೇಕೆಂಬುದೇ ನಮ್ಮ ಆಶಯವು.

ಆದರೆ, ಮಾತೃಸೇವೆಯನ್ನು ಹೇಗೆ ಮಾಡಬೇಕು. ಮಾತೆಗೆ ಹೇಗೆ ಹಿತವನ್ನು ಆಚರಿಸಬೇಕು ಎಂದು ಕೇಳುವಿರಿ. ಮಾತೃಸೇವೆ—ಎಂದರೆ, ನಿಮ್ಮ ಸದಾಚರಣ ಸದ್ಗುಣಗಳಿಂದ ನೀವು ಕೀರ್ತಿಯುತರಾಗುವುದಲ್ಲದೆ ನಿಮ್ಮ ಮಾತೆಯ ಕೀರ್ತಿಯನ್ನೂ ಪ್ರಸಾರಗೊಳಿಸುವಂತೆ ನಡೆಯುವುದೇ ನಿಜವಾದ ಸೇವೆ. ನೀವು ನಿಮ್ಮ ಪತಿಗೃಹದಲ್ಲಿ, ಪತಿ ಪುತ್ರ ಪರಿವಾರಗಳೊಡನೆ ವಿಹಿತ ಮಾರ್ಗದಲ್ಲಿ ವರ್ತಿಸುತ್ತ ತಾರತಮ್ಯವರಿತು ಸರ್ವರಿಗೂ ಹಿತವನ್ನುಂಟುಮಾಡುತ್ತ ಆನಂದಚಿತ್ತರಾಗಿರುವುದೇ ಮಾತೆಗೆ ನೀವು ಮಾಡುವ ಹಿತವು. ಅವಳ ಉಪಕಾರವನ್ನು ಕುರಿತು ಕೃತಜ್ಞತಾ ಬುದ್ಧಿಯುಳ್ಳವರಾಗಿರುವುದೂ, ಅವಳ ಸ್ವರ್ಗೀಯ ಪ್ರೇಮವನ್ನು ಸಂಭಾವಿಸಿ ಅವಳಲ್ಲಿ ಅಕೃತ್ರಿಮವಾದ, ನಿರ್ಮಲವಾದ ಪ್ರೇಮವನ್ನಿಡುವುದೂ ಅವಳಿಗೆ ಎಂದರೆ ತಾಯಿಗೆ ನೀವು ಮಾಡುವ ಉಪಕೃತಿ!

ಅಕ್ಕ ತಂಗಿಯರೇ! ಹೆಣ್ಣುಮಕ್ಕಳಲ್ಲಿ ಏನಾದರೊಂದು ಕೆಟ್ಟ ನಡತೆಯು ಕಂಡುಬಂದರೆ, "ಯಾವ ಮಹಾಗುಣಸಂಪನ್ನೆಯ ಮಗಳಪ್ಪಾ" ಎಂದೂ, "ತಾಯಿಯಂತೆ ಮಗಳೂ" ಎಂದೂ ಅಪವಾದವು ತಾಯಿಯ ತಲೆಯಮೇಲೆ ಬೀಳಬರುವುದು. ಇದರಿಂದ ತಾಯಿಯ ಗೌರವಕ್ಕೆ ಕೊರತೆಯೂ ಮನಸ್ಸಿಗೆ ತಾಪವೂ ಉಂಟಾಗುವುದರಿಂದ ಆ ಹೆಣ್ಣು ಹುಡುಗಿಯರು ತಾಯಿಯರಲ್ಲಿ ಅಪಚಾರಮಾಡಿದಂತಾಗುವುದು. ಹಾಗೆ ಮಾಡುವುದರಿಂದವರಿಗೆ ಹಾನಿಯುಂಟು. ನಮ್ಮ ಅಭ್ಯುದಯಕ್ಕೆ (ಏಳ್ಗೆಗೆ) ತಾಯಿಯ ಅನುಗ್ರಹವು ಮುಖ್ಯವು. ಅವಳ ಅಮೋಘವಾದ ಆಶೀರ್ವಾದವು ಲಭಿಸಬೇಕಾದರೆ ನಾವು ಇದ್ದಲ್ಲಿಯೇ ನಮ್ಮ ಕರ್ತವ್ಯ ಕಾರ್ಯದಲ್ಲಿ ನಿಷ್ಠೆಯುಳ್ಳವರಾಗಿ ವರ್ತಿಸುವುದು ಪ್ರಥಮ ಕಾರ್ಯವು. ನಮ್ಮ ತಿಳಿವಿಗೆ ಬಂದಷ್ಟು ಅನಾಥ, ಅಂಗಹೀನ, ಅವಿವೇಕಾಂಧರನ್ನು ಆದರಿಸಿ, ಉಪಚರಿಸಿ, ಎಚ್ಚರಿಸಿ ಕಾಪಾಡುವುದು ದ್ವಿತೀಯ ಕಾರ್ಯವು. ಆ ಬಳಿಕ, ನಮ್ಮ ಇತರ ಸೋದರೀ ವರ್ಗಕ್ಕೆ ಸೇರಿದ ದುಃಖಾರ್ತೆಯರಾದ ನಿರ್ಭಾಗ್ಯೆಯರೆನ್ನಿಸಿ ಕೊರಗುತ್ತಿರುವ ಆ ದೀನೆಯರನ್ನು ಅಗೌರವದಿಂದ ನೋಡದೆ, ಅಪಹಾಸ ತಿರಸ್ಕಾರಗಳನ್ನು ಮಾಡದೆ, ಮರುಕದಿಂದ—ಕನಿಕರದಿಂದ ನೋಡಿ, ಧರ್ಮಪ್ರತಿಪಾದನೆಗೆ ವಿಶೇಷ ಸಹಾಯಕರಾಗುವ ಅವರನ್ನು ನಿಷ್ಕಲ್ಮಷ ಪ್ರೇಮದಿಂದ ಸಂಭಾವಿಸಿ, ತಕ್ಕಮಟ್ಟಿಗೆ ಆತ್ಮಸ್ವರೂಪ ಜ್ಞಾನವನ್ನು ಹೊಂದುವಷ್ಟು ಮಟ್ಟಿಗೆ, ವಿಚಾರ ಸ್ವಾತಂತ್ರ್ಯವನ್ನಿತ್ತು ಧರ್ಮಾಭಿವೃದ್ಧಿ ಕಾರ್ಯದಲ್ಲಿ ಅವರನ್ನು ಮುಂದುಮಾಡಿಕೊಂಡು ಸಾದರದಿಂದ ವರ್ತಿಸುವುದು ತೃತೀಯ ಕಾರ್ಯವು. ನಾವು ಈ ಮೂರು ಮಹತ್ಕಾರ್ಯಗಳನ್ನು ಶ್ರದ್ಧೆಯಿಂದ ನಡೆಯಿಸಿದೆವಾದರೆ, ಸಮಾಜ ಧರ್ಮಗಳನ್ನು ಕ್ಷೋಭೆಗೊಳಿಸಲು ಅಲ್ಲಲ್ಲಿಗೆ ತಲೆಯೆತ್ತುತ್ತಿರುವ ದುರಾಚಾರಿಗಳೆಲ್ಲರನ್ನೂ ಜಯಿಸಿ ಅವರಿಗೆ ಬುದ್ಧಿಗಲಿಸಿ ದೇಶಕ್ಕೆ ಅವರಿಂದ ಆಗುವ ಕಷ್ಟವನ್ನು ಹೋಗಲಾಡಿಸಿದವರಾಗುವೆವು. ಆಗ ನಮ್ಮ ತಾಯಿಗೆ ನಮ್ಮಲ್ಲಿ ಅತಿಶಯವಾದ ಪ್ರೇಮವುಂಟಾಗುವುದು.

ಹೇಗೆ—ಏಕೆ—ಎಂದರೆ ಸೋದರಿಯರೇ, ನೀವೇ ವಿಚಾರಮಾಡಿ ನೋಡಿರಿ; ಈಗ ನೀವು ನಿಮ್ಮ ಎಲ್ಲಾ ಮಕ್ಕಳನ್ನೂ ಒಂದೇ ಬಗೆಯಾಗಿ

ಪ್ರೀತಿಸುವಿರಿ. ಅವರು ನಿರಂತರ ಸುಖಿಗಳಾಗಿರಬೇಕೆಂದೂ ಹಾರೈಸುವಿರಿ. ಅವರಲ್ಲಿ ಅಶಕ್ತರು ಅಂಗಹೀನರು ಇದ್ದರೆ ಅವರಿಗಾಗಿ ಕನಿಕರಪಡುವಿರಿ. ಅಂತಹರಿಗೆ ಸಹಾಯಮಾಡುವಂತೆ ನಿಮ್ಮ ಇತರ ಮಕ್ಕಳಿಗೆ ಹೇಳುವಿರಿ. ಅವರು ಅದರಂತೆ ನಡೆದರೆ ಆ ಮಕ್ಕಳನ್ನು ನೀವು ವಿಶೇಷವಾಗಿ ಆದರಿಸಿ ಮನ್ನಿಸುವಿರಿ, ಅಹುದಷ್ಟೆ? ಹಾಗಿಲ್ಲದೆ ಆ ಮಕ್ಕಳಲ್ಲಿ ಐಕಮತ್ಯವೂ ಪರಸ್ಪರ ಪ್ರೇಮಭಾವವೂ ಇಲ್ಲದೆ, ಪರಸ್ಪರ ದ್ವೇಷ, ಅಸೂಯೆ, ಆತ್ಮಪ್ರತಿಷ್ಠೆ, ದುರಾಗ್ರಹಗಳಿಂದ ಕಲಹ ಕಡಿದಾಟಗಳಲ್ಲಿ ತೊಡಗಿದರೆ ಆಗ ನಿಮಗೆ ಎಷ್ಟು ತಾಪವಾಗಬಹುದು? ಅಂತಹ ಮಕ್ಕಳಲ್ಲಿ ಸಿಟ್ಟುಮಾಡಿ, ಬೈದು, ಹೊಡೆದು, ಅವರನ್ನು ವಿವಿಧವಾಗಿ ದಂಡಿಸುವಿರಾದರೂ ಅವರು ಸಜೀವಿಗಳಾಗಿರಬೇಕೆಂದೂ, ಸನ್ಮಾರ್ಗಕ್ಕೆ ಬಂದಾರೆಂದೂ ಆಶಿಸುವಿರಲ್ಲದೆ ಅವರ ನಾಶವನ್ನು ಚಿಂತಿಸುವುದಿಲ್ಲ! ನಿಮ್ಮ ಮಕ್ಕಳು ಎಷ್ಟು ಸೋಮಾರಿಗಳಾಗಿರಲಿ, ನೀವು ಅವರಿಗೆ ಕೆಡುಕಾಗಬೇಕೆಂದು ಎಣಿಸುವವರಲ್ಲ. ಹಾಗೆಯೇ ಅಲ್ಲವೇ, ನಮ್ಮ ಆರ್ಯಮಾತೆಯು ತನ್ನ ಮಕ್ಕಳೆಲ್ಲರೂ ಅನ್ಯೋನ್ಯದಿಂದ, ಉದ್ಯೋಗತತ್ಪರರೂ, ಕಾರ್ಯದಕ್ಷರೂ, ಸತ್ಯನಿಷ್ಠರೂ ಆಗಿ ವರ್ತಿಸುತ್ತಿರಬೇಕೆಂದು ಹಾರೈಸುವಳು? ನೀವು ನಿಮ್ಮ ಮಕ್ಕಳನ್ನು ಪ್ರೀತಿಸುವಂತೆ ಇತರರ ಮಕ್ಕಳನ್ನು ಪ್ರೀತಿಸಲಾರಿರಿ! ನಿಮ್ಮ ಮಕ್ಕಳು ನಿಮ್ಮನ್ನು ಪ್ರೀತಿಸುವಂತೆ ಅನ್ಯರ ಮಕ್ಕಳು ನಿಮ್ಮನ್ನು ಪ್ರೀತಿಸಲಾರರು. ನೀವು ಆದರವನ್ನು ತೋರಿಸಿದಾಗಷ್ಟೇ ಅನ್ಯರ ಮಕ್ಕಳು ನಿಮ್ಮ ಮುಂದೆ ಆಡಿ, ನಿಮ್ಮಿಂದಲೇನಾದರೂ ಪಡೆದು ಹೊರಟುಹೋಗುವವರಲ್ಲದೆ ನಿಮ್ಮಲ್ಲಿರತಕ್ಕವರಲ್ಲ. ಅದರಂತೆ ನಮ್ಮ ದೇಶಮಾತೆ ನಮ್ಮನ್ನು ಪ್ರೀತಿಸುವಂತೆ ನಮಗೆ ಸುಖ, ಶುಭದಾಯಿನಿಯಾಗುವಂತೆ ಅನ್ಯರನ್ನು ನೋಡಲು ಶಕ್ಯವಿಲ್ಲ. ಆ ಅನ್ಯರು ನಮ್ಮ ಮಾತೆಯನ್ನು ಮನಃಪೂರ್ವಕವಾಗಿ ಪ್ರೀತಿಸುವರೂ ಅಲ್ಲ, ನಮ್ಮ ಮಾತೆಯಿಂದೇನಾದರೂ ಮನ್ನಣೆ—ಲಾಭ ಹೊಂದಿಹೋಗಬೇಕೆಂಬ ಆಶೆಯಿಂದಷ್ಟೇ ನಿಲ್ಲುವ ಇತರರಿಂದ ನಮ್ಮ ಮಾತೆಗಾಗಲಿ, ಮಾತೆಯ ಸಂತಾನವಾದ ನಮಗಾಗಲಿ, ಆವ ಹಿತವಾದೀತು? ನಮ್ಮ ನಮ್ಮಲ್ಲಿ ಪರಸ್ಪರ ಪ್ರೀತಿ ವಿಶ್ವಾಸಗಳಿಲ್ಲದೆ ನಾವು ನಮ್ಮವರನ್ನು ದೂರಿ, ಅನ್ಯರನ್ನು ಸೇರಿ, ಅವರನ್ನು ಆಶ್ರಯಿಸಿದರೆ ಅದರಿಂದ ನಮ್ಮ ಗೌರವ ಹಾನಿಯೂ

ನಮ್ಮ ಮಾತೆಗೆ ಮನಸ್ತಾಪವೂ ಉಂಟಾಗುವುದು. ನಮ್ಮಲ್ಲಿ ವಿವೇಕವು ಕಡಿಮೆಯಾಗುತ್ತ ಬಂದಂತೆಲ್ಲಾ ಇತರರ ಪ್ರಾಬಲ್ಯವೂ ಹೆಚ್ಚುತ್ತ ಬಂದು ಕಡೆಗೆ ನಾವು ಮೂರ್ಖರಾಗಿ ವ್ಯರ್ಥಜೀವಿಗಳೆನಿಸುವೆವು. ಹೀಗಾಗಿಯೇ ನಮ್ಮ ದೇಶಮಾತೆಯ ಸ್ಥಿತಿ ಅತ್ಯಂತ ಶೋಚನೀಯವಾಗಿರುವುದು!

ಪ್ರಿಯ ಸೋದರಿಯರೇ! ಅಧಿಕವಾಗಿ ಹೇಳಲು ಶಕ್ತಿ ಸಾಲದು, ಮತ್ತು ನಿಮಗೆ ಹೇಳುವ ಅಧಿಕಾರವೂ ನಮಗಿಲ್ಲ. ಆದರೆ ಅಲ್ಲಲ್ಲಿಗೆ ಕಂಡು ಬಂದ ಅನರ್ಥಗಳಿಂದಲೂ, ಅಡಿಗಡಿಗೆ ಕೇಳುತ್ತಲಿರುವ ಸ್ತ್ರೀ ವರ್ಗದಮೇಲಿನ ದೌರ್ಜನ್ಯಾಪವಾದಗಳಿಂದಲೂ ಪುರುಷರು ಇಷ್ಟಾದರೂ ಸ್ತ್ರೀಯರನ್ನು ಅವಹೇಳನ ಮಾಡುವುದನ್ನು ಬಿಡದೆ ಅವರನ್ನು ವಿವೇಕ ಮಾರ್ಗಕ್ಕೆ ತರುವ ಪ್ರಯತ್ನಮಾಡದೆ ಉಪೇಕ್ಷೆಮಾಡುತ್ತಲೂ ವ್ಯರ್ಥವಾದ ವಿರಕ್ತ ವೇಷ ಭಾಷಣಗಳಲ್ಲಿ ಮಾತ್ರ ನಿರತರಾಗುತ್ತಲೂ ಇರುವುದನ್ನು ನೋಡಿಯೂ ಮನಸ್ಸಿಗೆ ಉಂಟಾದ ಉದ್ವಿಗ್ನತೆಯಿಂದ ಇಲ್ಲಿಯವರೆಗೂ ನಿಮ್ಮ ಮುಂದೆ ಹಲುಬಿದೆವಲ್ಲದೆ ನಿಮ್ಮಲ್ಲಿ ಅಸಹನೆಯಿಷ್ಟೂ ಇಲ್ಲವೆಂದು ತಿಳಿದು ಕ್ಷಮಿಸಿರಿ!

ತಾಯಿಯರೇ! ಇನ್ನಾದರೂ ಆಲಸ್ಯಾದಿ ನಿದ್ರಾ ಜಡ ರೋಗಗಳನ್ನು ನಾಶಪಡಿಸಿಕೊಂಡು ಸ್ವಲ್ಪ ಸ್ವಲ್ಪವಾಗಿಯಾದರೂ ಜ್ಞಾನದೃಷ್ಟಿಯಿಂದ ನೋಡಲು ಪ್ರಯತ್ನಪಡಿರಿ. ಸ್ತ್ರೀ ಶಿಕ್ಷಣ, ಸ್ತ್ರೀ ವಿದ್ಯಾಭ್ಯಾಸವೆಂದು ನಾಲ್ಕು ಕಡೆಗಳಲ್ಲಿಯೂ ಘೋಷವಾಗುತ್ತಿದ್ದರೂ, ಅದಕ್ಕಾಗಿ ಅನೇಕ ಪ್ರಯತ್ನಗಳೂ ಅನೇಕ ಸಂಸ್ಥೆಗಳ ಸ್ಥಾಪನವೂ ನಡೆದಿದ್ದರೂ ನಮ್ಮವರಿಗೆ ನಿಜವಾದ ಪ್ರಯೋಜನವು ಮಾತ್ರ ಆಗಿಲ್ಲ. ನಮ್ಮವರ ಜ್ಞಾನಾಭಿವೃದ್ಧಿಗಾಗಿ ವಿದ್ಯಾಭ್ಯಾಸಕ್ಕೆಂದು ಸರಕಾರದವರೂ ದೇಶಬಾಂಧವರೂ ಅಪರಿಮಿತವಾದ ಧನವ್ಯಯ ಮಾಡಿರುವರು. ಆದರೇನು? ನಮ್ಮವರ ಪ್ರಕೃತಿ ಮನೋಧರ್ಮಗಳನ್ನು ಬಲಪಡಿಸುವಂತಹ ಶಿಕ್ಷಣ—ಅಭ್ಯಾಸಗಳ ಲಾಭವು ಮಾತ್ರ ನಮ್ಮವರಿಗೆ ಇನ್ನೂ ದೊರೆಯುವಂತಾಗಿಲ್ಲ. ವಿದ್ಯಾಭ್ಯಾಸವು ಹೆಚ್ಚುತ್ತ ಬಂದಂತೆಲ್ಲಾ ನಮ್ಮ ಸ್ತ್ರೀಯರಲ್ಲಿ ಧರ್ಮಾಭಿಮಾನವು ಕ್ಷಯಿಸುತ್ತ ಬರುವುದು ಹಾಗಿರಲಿ, ನಮ್ಮವರಲ್ಲಿದ್ದ ಸರಳತೆ, ಶುದ್ಧವಾದ ಆಚಾರ, ಸ್ತುತ್ಯವಾದ ಉದಾತ್ತವಾದ ವಿಚಾರ—ಇವೆಲ್ಲವೂ ಮಾಯವಾಗಿ,

ನಾಟಕದ ವೇಷಧಾರಿಗಳಂತೆ, ಚಿತ್ರಪುತ್ಥಳಿಗಳಂತೆ, ಶಿಲಾವಿಗ್ರಹಗಳಂತೆ—ಸ್ವೇಚ್ಛೆಯಿಂದವಾದ ವೇಷಭಾಷಣಗಳ ಆಡಂಬರ ಅಟ್ಟಹಾಸಗಳೂ ಅಂತಃಕರಣ ರಾಹಿತ್ಯದ (ಶೂನ್ಯಹೃದಯ) ಆಕಾರ ಮಾತ್ರವೂ ಮಾಧುರ್ಯವಿಹೀನತೆಯಿಂದಾದ ಕಾಠಿನ್ಯವೂ ತೋರುತ್ತಿರುವುವು. "ಅಂಕೆಯಿಲ್ಲದ ಕಪಿ ಲಂಕೆಯನ್ನು ಸುಟ್ಟಿತು" ಎಂಬ ಗಾದೆಗನುಸಾರವಾಗಿ ನಮ್ಮವರಲ್ಲಿ ಕೆಲವರಂತೂ ವಿದ್ಯಾವ್ಯಾಸಂಗದ ನೆವದಿಂದ ಸ್ವಜನ, ಸ್ವಗೃಹ ಪರಿವಾರವೆಲ್ಲವನ್ನೂ ಬಿಟ್ಟು ಪರಸ್ಥಳದಲ್ಲಿ ಸ್ವೇಚ್ಛೆಯಿಂದ ನಡೆಯುತ್ತಿರುವುದರಿಂದ ಮೊದಲೇ ಸುಶಿಕ್ಷಣದ ಅಭಾವದಿಂದ ಕೊರತೆಹೊಂದಿದ ಈಗಿನ ವ್ಯಾಸಂಗವನ್ನು ಮತ್ತೂ ಅಪವಾದ ಕಲುಷಿತವನ್ನಾಗಿ ಮಾಡುತ್ತಿರುವರು. ಇದರಿಂದ ದೇಶೋನ್ನತಿಗಾಗಿ ಅಹೋರಾತ್ರಿ ಶ್ರಮಪಡುತ್ತ ಅಪರಿಮಿತವಾಗಿ ವ್ಯಯಮಾಡುತ್ತಿರುವ ದೇಶೋದ್ಧಾರಕರ ಉದ್ದೇಶವೂ ಭಂಗಹೊಂದುತ್ತಿರುವುದನ್ನು ಕುರಿತು ಎಷ್ಟು ವಿಷಾದಪಡಬಹುದೋ ಯೋಚಿಸಿರಿ.

ನಾರಿಯರೇ! ತಾಯಿಯಾದವಳಿಗೆ ಹೆಣ್ಣುಮಕ್ಕಳಲ್ಲಿ ಮಮತೆ ಹೆಚ್ಚೆಂದು ಎಲ್ಲರೂ ಹೇಳುವರು. ಏಕೆಂದರೆ, 'ಈ ಹೆಣ್ಣು ದೊಡ್ಡವಳಾಗಿ, ಒಂದು ಮನೆಗೆ ಒಡತಿಯಾಗಿ ನಿಂತಾಗಲೂ ತಮ್ಮಲ್ಲಿ ಪ್ರೇಮ–ಕೃತಜ್ಞತೆಗಳುಳ್ಳವಳಾಗಿ, ತಮ್ಮ ಕ್ಷೇಮಲಾಭವನ್ನು ಕೋರುವಳಲ್ಲದೆ, ತನ್ನ ಅತ್ತೆಯ ಮನೆಯವರ, ಸುಖ–ಸಂತೋಷಗಳಿಗೂ ಆಧಾರಳಾಗಿ ಎಲ್ಲರನ್ನೂ ಆದರಿಸಿ ಎಲ್ಲರಿಂದಲೂ ಆದರಿಸಲ್ಪಡುವಳಾದುದರಿಂದ ಉಭಯ ಕುಲಕ್ಕೂ ಬೇಕಾದವಳಾಗುವಳು' ಎಂದು ಅವರನ್ನು ವಿಶೇಷವಾಗಿ ಪ್ರೀತಿಸುವರು. ತಮ್ಮ ಕಷ್ಟಸುಖಗಳಿಗಾಗಿ ತಾನೂ ಮರುಕಗೊಂಡು ಸಮಯವೊದಗಿದಾಗ ತಮ್ಮ ಸೇವೆಗೆ ಒದಗುವಳೆಂದು ಮತ್ತೂ ಮಮತೆಯುಳ್ಳವರಾಗಿರುವರು. ಅಂತಹ ಮಾತೃ ಹೃದಯದ ಪವಿತ್ರ ಉದ್ದೇಶವನ್ನು ನಾವು ಸರ್ವಪ್ರಕಾರದಿಂದಲೂ ಈಡೇರಿಸಬೇಕಲ್ಲವೇ? ನಮ್ಮ ಸುಖಕ್ಕಾಗಿ ತನ್ನ ಪ್ರಾಣವನ್ನಾದರೂ ಸಂತೋಷದಿಂದ ಕೊಡಲು ಸಿದ್ಧಳಾಗುವಂತಹ ಪ್ರೇಮಮೂರ್ತಿಯಾದ ಮಾತೆಯ ಹಿತಕ್ಕಾಗಿ ನಾವೂ ನಮ್ಮ ಶಕ್ತಿಯನ್ನು ನಿರ್ವಂಚನೆಯಿಂದ ವೆಚ್ಚಮಾಡುವುದು ವಿಹಿತವಲ್ಲವೆ?

ಆರ್ಯಭಗಿನಿಯರೇ! ಈಗ ನೀವು ಮಾಡಬೇಕಾದ ಕಾರ್ಯವೇನೆಂದರೆ, ನಿಮ್ಮ ಬಾಲಿಕಾ ಸಮುದಾಯಕ್ಕೆ ಜ್ಞಾನ, ಭಕ್ತಿ, ಕರ್ಮ ಕ್ಷಮತೆಗಳುಂಟಾಗುವಂತೆ, ಅವರ ಶಿಕ್ಷಣ, ಅಭ್ಯಾಸಗಳ ಕಡೆಗೆ ವಿಶೇಷ ಗಮನ ಕೊಡಬೇಕಾದುದೂ, ಅವರಿಗೆ ನೀವು ಕೊಡಬೇಕಾದ ಶಿಕ್ಷಣಕ್ಕಾಗಿ, ಮತ್ತು ನಿಮ್ಮ ಸದಸದ್ವಿವೇಕಜ್ಞಾನದ ಭಂಡಾರವನ್ನು ಬೆಳೆಯಿಸುವುದಕ್ಕಾಗಿ, ನೀವು ನಿರಲಸತೆಯಿಂದ ನಿಮಗೆ ದೊರೆತ ಅವಕಾಶದಲ್ಲಿ ನಿಮ್ಮ ನಿಮ್ಮ ಪತಿ, ಗುರು, ಹಿರಿಯರ ಮತ್ತು ಹಿತಚಿಂತಕರಾದ ವಿದ್ವಸ್ಮಣಿಗಳ ಬಳಿಯಲ್ಲಿ ವಿಚಾರಮಾಡುತ್ತ ತಕ್ಕಮಟ್ಟಿಗೆ ಧರ್ಮರಹಸ್ಯ, ನೀತಿಶಾಸ್ತ್ರಗಳ ಪರಿಶ್ರಮವನ್ನು ಪಡೆಯಬೇಕಾದುದೂ ಮತ್ತು ನಿಮ್ಮ ಬಂಧುವರ್ಗಕ್ಕೆ ಸೇರಿದ ಪತಿವಿಹೀನೆಯರಾಗಿ ದುಃಖ ಶೋಕಾತುರದಿಂದ ಜೀವನ್ಮೃತೆಯರಂತೆ ಭಾವಿಸಲ್ಪಡುತ್ತಲಿರುವ ಆ ದೀನದುಃಖೀ ಭಗಿನಿಯರಿಗೆ ಆತ್ಮಜ್ಞಾನ, ಭಗವತ್ಸಂಕಲ್ಪ, ಅವರು ಮಾಡಬೇಕಾದ ಕರ್ತವ್ಯಗಳ ತತ್ವಬೋಧೆಯಾಗಿ, ಅವರು ಮುಂದೆ ಮನೋನಿಗ್ರಹಶಕ್ತಿಯನ್ನು ಹೊಂದಿ ಸಮಾಹಿತ ಚಿತ್ತದಿಂದ ಧರ್ಮರಕ್ಷಣ ದೀಕ್ಷಾಬದ್ಧರಾಗಿ ತಮ್ಮ ಸೋದರೀ-ಸೋದರರಿಗೆ ಕಷ್ಟಕ್ಲೇಶಗಳುಂಟಾದ ಕಾಲದಲ್ಲಿ ತಾವು ಬೆಂಬಲವಾಗಿ ನಿಂತು ಸಹಕರಿಸುವ ಸಾಮರ್ಥ್ಯ ಹೊಂದಿ ದೇಶೋನ್ನತಿಗೆ ಮುಖ್ಯ ಕಾರ್ಯಕರ್ತ್ರಿಯರೆನ್ನಿಸಿ ಮೆರೆವಂತೆ ಅವರಿಗೆ ಅವಕಾಶವನ್ನೂ ಅನುಕೂಲವನ್ನೂ ಕಲ್ಪಿಸಿಕೊಟ್ಟು, ಸದ್ಗ್ರಂಥ ಸಮಾಲೋಚನೆಯಿಂದ ಕಾಲಕ್ಷೇಪಮಾಡುವ ಪದ್ಧತಿಯನ್ನೇರ್ಪಡಿಸಿ, ಅವರ ಸಂಗಡ ನೀವೂ ಇತಿಹಾಸ, ಪುರಾಣ, ಧರ್ಮಶಾಸ್ತ್ರ, ಆರೋಗ್ಯ ನಿಧಾನಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಪಠಿಸುತ್ತಲೂ, ವಿಚಾರಮಾಡುತ್ತಲೂ ಬರುವುದಲ್ಲದೆ ಸದ್ಯಃಸ್ಥಿತಿಯನ್ನೂ ಮತ್ತು ಇದರ ಪರಿಹಾರೋಪಾಯವನ್ನೂ ಕುರಿತು ಪ್ರಸ್ತಾಪಿಸುವ ಉತ್ತಮ ವೃತ್ತಪತ್ರ, ಮಾಸಿಕ ಪುಸ್ತಕ, ಪ್ರಬಂಧಗಳನ್ನೂ ತರಿಸಿ ಸಾವಧಾನದಿಂದ ಮಾಡಬೇಕಾದ ಕರ್ತವ್ಯವೆಂತೆಂಬುದನ್ನು ನಿರ್ಧರಿಸಿ, ಆಲಸ್ಯ ಉದಾಸೀನಗಳನ್ನುಳಿದು ಜಾಗರೂಕತೆಯಿಂದಲೂ ಶ್ರದ್ಧೆಯಿಂದಲೂ ಪ್ರಯತ್ನವನ್ನು ಕೈಕೊಳ್ಳಬೇಕಾದುದೂ ಪ್ರಾಮುಖ್ಯ ಕಾರ್ಯಗಳಾಗಿರುವುವು.

ಸೋದರಿಯರೇ! ನಡೆನೋಡಿರಿ, ಕಾಲಚಕ್ರವು ಸುತ್ತುತ್ತ ಬರುವಂತೆ ಜನರ ಪ್ರವೃತ್ತಿಮಾರ್ಗವೂ ಬದಲಾವಣೆ ಹೊಂದುವುದು. ಅದರಂತೆಯೇ ಅವರ ಆಕಾರ ವಿಚಾರಗಳಲ್ಲಿಯೂ ಪರಿವರ್ತನವಾಗುವುದು. ಅದರಂತೆಯೇ ನಮ್ಮ ಪೂರ್ವಜರು ಪುಣ್ಯಪ್ರಭಾವದಿಂದಲೂ ಕಾಲಮಹಿಮೆ ಯಿಂದಲೂ ಅತ್ಯಂತ ವೈಭವವನ್ನು ಹೊಂದಿದ್ದರು. ಕಾಲಬಲದಿಂದ ನಮ್ಮ ವರ ಈಗಿನ ಸ್ಥಿತಿಯು ಈ ರೀತಿಯಾಗಿ ಪರಿಣಮಿಸಿರುವುದು. ಆದರೂ ಇದಕ್ಕಾಗಿ ನಾವು ಚಿಂತಿಸುತ್ತ ಕುಳಿತುಕೊಳ್ಳುವ ಕಾರಣವಿಲ್ಲ. ಧೈರ್ಯ ಸ್ಥೈರ್ಯದಿಂದ ನಮ್ಮ ಪುರುಷ ಬಾಂಧವರ ಸಹಾಯವನ್ನೂ ಪಡೆದು ಪ್ರಯತ್ನತತ್ಪರರಾದರೆ ಮತ್ತೆ ಮುನ್ನಿನ ಉತ್ತಮ ಸ್ಥಿತಿಗೆ ಬರಬಹುದಾದೀ ತೆಂಬ ಆಶೆಗೆ ಅವಕಾಶವಿದೆ. ನಮ್ಮ ಪ್ರಯತ್ನಕ್ಕೆ ಇದೇ ಸಕಾಲವು! ಜಗತ್ತಿನಲ್ಲೆಲ್ಲಾ ಚಲನ ವಲನಗಳ ಕೋಲಾಹಲವೆದ್ದಿರುವುದು. ಪ್ರತಿ ಯೊಂದು ಪ್ರಾಂತದವರೂ, ಪ್ರತಿ ಧರ್ಮಪಂಥದವರೂ ತಮ್ಮ ತಮ್ಮ ಪ್ರಾಂತದ ಮತ್ತು ಧರ್ಮಪಂಥದ ಅಭ್ಯುದಯಕ್ಕಾಗಿ ವಿಚಾರಮಾಡುತ್ತ ಲಿರುವರು. ಎಲ್ಲೆಲ್ಲಿಯೂ ದೇಶಾಭಿಮಾನವೂ, ಭಾಷಾವಾತ್ಸಲ್ಯವೂ ಮೇರೆ ವರಿದು ಭೋರ್ಗರೆವಂತಿರುವುವು. ಸ್ವದೇಶ, ಸ್ವಭಾಷಾ, ಸ್ವಧರ್ಮ, ಸಮಾಜ, ಮತಗಳ ಉದ್ಧಾರಕ್ಕಾಗಿ ನಮ್ಮ ಪುರುಷ ಬಾಂಧವರು ಆಬಾಲ ವೃದ್ಧರಾದಿಯಾಗಿ ಸರ್ವರೂ ಏಕನಿಷ್ಠೆಯಿಂದ ಉದ್ಯೋಗಮಾಡುತ್ತಿರು ವರು. ಈ ಸಮಯದಲ್ಲಿಯೇ ನೀವೂ ನಿಮ್ಮ ಕಣ್ಣುಗಳನ್ನು ಚೆನ್ನಾಗಿ ತೆರೆದು ಸುತ್ತಲೂ ನೋಡಿ. ನಾಲ್ಕುಕಡೆಗಳಲ್ಲಿಯೂ ಪ್ರವಾಹದಂತೆ ಭೋರ್ಗರೆವ ಘೋಷಗಳನ್ನು ಕಿವಿಕೊಟ್ಟು ಕೇಳಿ, ಶಾಂತಮನಸ್ಸಿನಿಂದ ವಿಚಾರಮಾಡಿ, ಸ್ಫೂರ್ತಿಹೊಂದಿ, ಎದ್ದುಬಂದು, ನಿಮ್ಮ ಧರ್ಮದೇವತೆ ಯನ್ನು ಭಕ್ತಿಯಿಂದ ಆರಾಧಿಸಿ ಕರೆತಂದು, ಹೃದಯಮಂದಿರದಲ್ಲಿ ಸ್ಥಾಪನ ಗೊಳಿಸಿ, ಭಾಷಾಭಿಮಾನಿದೇವಿಯನ್ನು ಆದರಿಸಿ, ನಿಮ್ಮ ತಾಯ್ನುಡಿಗಳಿಂದ (ಮಾತೃಭಾಷೆಗಳಿಂದ) ಅರ್ಚಿಸಿ, ದೇಶಮಾತೆಯನ್ನು ನಿರತಿಶಯ ಪ್ರೇಮ ದಿಂದ, ಅನನ್ಯಶರಣ್ಯಭಾವದಿಂದ ಆರಾಧಿಸಿ, ಸಂಕೀರ್ತಿಸಿ, ನಿಮ್ಮ ಪುರುಷರ ಕರ್ಣ, ನೇತ್ರ, ಹೃದಯಂಗಳು ಸ್ಫುರಣಹೊಂದುವಂತೆ ಮಾಡಿರೇಳಿರಿ! ನಿಮ್ಮ ಪ್ರೋತ್ಸಾಹವು ದೊರೆತಂತೆಲ್ಲಾ ನಿಮ್ಮ ಪುರುಷರಲ್ಲಿ ನವಚೈತನ್ಯ

ವುಂಟಾಗಿ, ದ್ವಿಗುಣವಾದ ಶಕ್ತಿ–ಉತ್ಸಾಹಗಳಿಂದ ತಾವು ಕೈಕೊಂಡ ಕಾರ್ಯಗಳನ್ನು ಸಾಧಿಸುವರು. ಆಗ ಪ್ರಜ್ಞಾವತಿಯರೆಂದೂ, ಕ್ಷಮಾ ಗುಣ ಸಂಪನ್ನೆಯರೆಂದೂ, ಚೈತನ್ಯದಾಯಿನಿಯರಾದ ಆರ್ಯನಾರೀ ಮಣಿಯರೆಂದೂ, ಸರ್ವರೂ ನಿಮ್ಮನ್ನು ಅಭಿನಂದಿಸುವರು. ಹಾಗೆ ಅಭಿನಂದನಹೊಂದಿದ ನಿಮ್ಮನ್ನು ನೋಡಿ ನಮ್ಮ ದೇಶಮಾತೆಯೂ ಆನಂದ ಪಡುವಳು. ಇಂತಹ ಸುಯೋಗವನ್ನು ಮಾತ್ರ ಹೇಗೂ ವ್ಯರ್ಥಗೊಳಿಸಿ ಕೊಳ್ಳಬೇಡಿರಿ.

## ಇನ್ನು ಇಹಲೋಕದ ನಶ್ವರ ಸುಖ, ಭೋಗಗಳಿಗೆ ದೂರವಾಗಿ ದುಃಖಿಸುತ್ತಿರುವ ನಮ್ಮ ವಿತಂತು ಸೋದರಿಯರಲ್ಲಿ ನಮ್ಮ ವಿನಂತಿಯೊಂದು.

"ನಮ್ಮ ಮಾನ್ಯ ವಿಶ್ವಸನೀಯ ಸೋದರಿಯರೇ! ಇನ್ನು ಕಣ್ಣೊರಸಿಕೊಳ್ಳಿರಿ! ಉಕ್ಕಿಬರುವ ಕಣ್ಣೀರನ್ನು ಪ್ರಯಾಸದಿಂದ ತಡೆಯಿರಿ, ನಿಮ್ಮ ಸ್ವರೂಪ, ಸ್ಥಿತಿಗತಿಗಳನ್ನು ಕುರಿತು, ಪಾರಮಾರ್ಥಿಕ ಬುದ್ಧಿಯಿಂದ ವಿಚಾರಮಾಡಿರಿ, ಆತ್ಮತತ್ವವನ್ನು ತಿಳಿದುಕೊಳ್ಳಿರಿ. ಎಂದರೆ ಆಗ ನಿಮಗೆ ಶೋಕವ್ಯಾಕುಲವು ಪರಿಹಾರವಾಗಿ, ಕ್ಷಣಭಂಗುರವೂ ಕ್ಷುಲ್ಲಕವೂ ಆದ ಐಹಿಕಸುಖ ಭೋಗ ಸಂಪದಗಳಲ್ಲಿ ಜಿಗುಪ್ಸೆಯುಂಟಾಗಿ, ಶಾಶ್ವತವೂ ಅಮೋಘವೂ ಆದ ಪಾರತ್ರಿಕ ಸುಖಾನುಭವದ ಕಡೆಗೆ ಮನಸ್ಸು ತಿರುಗಿ, ಆತ್ಮೋದ್ಧಾರದಲ್ಲಿ ಬುದ್ಧಿ ಪ್ರವರ್ತಿಸುವುದು. ಆಗಲೇ ನೀವು ನಿಮ್ಮ ಅಂತರ್ಗತರಾಗಿರುವ ಪತಿಗಳ ನೆಲೆಯನ್ನರಿತು, ಅವರು ನಿಮ್ಮ ಹೃದಯ ಪೀಠದಲ್ಲಿಯೇ ನೆಲಸಿ ನಿಮ್ಮ ಆತ್ಮಗಳೊಡನೆ ಏಕೀಭವಿಸಿ, ನಿಮ್ಮ ಪುಣ್ಯ ಕಾರ್ಯಗಳ ಉತ್ತೇಜಕರಾಗಿ ನಿಂತು, ಸಹಕರಿಸುವರೆಂಬುದನ್ನೂ, ಅವರು ಈ ಜನ್ಮದಲ್ಲಿ ಮಾಡಬೇಕಾಗಿದ್ದ ಧರ್ಮಸಾಧನಗಳ ಕಾರ್ಯ ಭಾಗವನ್ನು ನೀವು ಮನಃಪೂರ್ವಕ ಮಾಡುವುದರಿಂದ ಅವರನ್ನು ಋಣಮುಕ್ತರನ್ನಾಗಿ ಮಾಡಿ ಕೃತಾರ್ಥರೆನ್ನಿಸಬೇಕೆಂಬುದನ್ನೂ ತಿಳಿದುಕೊಳ್ಳಲು ಶಕ್ತರಾಗು ವಿರಿ. ಆಗ ನಿಮಗಾಗುವ ಆನಂದವನ್ನು ಅಷ್ಟಿಷ್ಟೆಂದಾಗಲಿ, ಅಂತಿಂತಹು ದೆಂಬುದನ್ನಾಗಲೀ ವಿವರಿಸಲು ಸಾಧ್ಯವಿಲ್ಲ. ಆದುದರಿಂದ ಪೂಜ್ಯ ಭಗಿನಿ

ಯರೇ, ಮ್ಲಾನಮುದ್ರೆಯನ್ನು ಕಳೆದು, ಸಮಾಧಾನದಿಂದೇಳಿರಿ! ಗತ ವಿಷಯಗಳನ್ನು ಕುರಿತು ಚಿಂತಿಸುವುದನ್ನು ಬಿಟ್ಟು, ನಿಮ್ಮ ಅಕ್ಕತಂಗಿಯರ, ತಾಯಿ–ಮಕ್ಕಳ, ಸುಖ ಸೌಭಾಗ್ಯಾಭಿವೃದ್ಧಿಯ ಕಡೆಗೆ ಮನಸ್ಸು ಕೊಟ್ಟು, ಕಾಲೋಚಿತ ಸಲಹೆ—ಸಹಾಯಗಳಿಂದ ಅವರನ್ನು ಕಷ್ಟ ಸಮಯಗಳಲ್ಲಿ ಸಂರಕ್ಷಿಸಿರಿ. ಕಷ್ಟಕಾಲಗಳಲ್ಲಿ ನಿಮ್ಮ ಸಹಾಯವು ಅವಶ್ಯ ವಾಗಿ ಬೇಕಾಗಿರುವುದು. ತಾಯಿಯರೇ! ಶಂಕೆಪಡಬೇಡಿರಿ, "ದುಡಿ ಯುವವರಿಗೆ ಮಾತ್ರವೇ ಜನರು ನಮ್ಮನ್ನು ಕರೆವರು. ಆ ಬಳಿಕ ನಮ್ಮನ್ನು ಕಡೆಗಣ್ಣಿಂದಾದರೂ ನೋಡದೆ ಜರಿದು ನೂಕುವರು" ಎಂದು ದುಃಖಿಸಬೇಡಿರಿ. ಕೃತಘ್ನರು ಮಾತ್ರ ಹಾಗೆ ಮಾಡುವರೇ ಹೊರತು ವಿಚಾರಪರರು ಹಾಗೆ ಮಾಡಲಾರರು. ಒಂದುವೇಳೆ ಹಾಗೆ ತಿರಸ್ಕರಿಸುವ ಕೃತಘ್ನರಿಗೆ ಕೂಡ, ನಿಮ್ಮ ತಪೋಬಲದಿಂದ, ನಿಮ್ಮ ಪುಣ್ಯಪರಿಪಾಕದಿಂದ ಪಶ್ಚಾತ್ತಾಪವಾಗಿ ಮುಂದೆ ಅವರು ನಿಮ್ಮಲ್ಲಿ ಅತ್ಯಂತ ವಿಧೇಯರೂ ಕೃತಜ್ಞರೂ ದಯಾಳುಗಳೂ ಸಹಾನುಭೂತಿಯುಳ್ಳವರೂ ಆಗುವರು.

ಆದುದರಿಂದ ಸನ್ಮಾನ್ಯ ಭಗಿನಿಯರೇ! ಬನ್ನಿರಿ! ಧರ್ಮಾಭಿಮಾನಿ ದೇವತೆಗಳಂತೆ, ತಪಸ್ವಿನಿಯರಂತೆ, ಆತ್ಮವಿಚಾರ, ಪರತತ್ವಜ್ಞಾನ, ಪರೋಪ ಕಾರ ಚಿಂತನಗಳ ಉಜ್ವಲವಾದ ತೇಜಸ್ಸಿನಿಂದ, ಜ್ಯೋತಿಬಿಂಬಗಳಂತೆ ಪ್ರಕಾಶಿಸುತ್ತ ಮಧ್ಯದಲ್ಲಿ ನಿಲ್ಲಿರಿ. ಗೃಹಿಣೀಪದವಿಯನ್ನು ಅಲಂಕರಿಸಿ ರುವ ನಾರೀಮಣಿಯರೆಲ್ಲರೂ ಕರ್ತವ್ಯತತ್ಪರರಾಗಿ ಒಂದು ಕಡೆಗೆ ನಿಲ್ಲಲಿ, ದೇಶೋದ್ಧಾರ ಮಹಾವ್ರತದಲ್ಲಿ ಬದ್ಧಾದರರಾಗಿರುವ ಪುರುಷಪುಂಗ ವರು ಮತ್ತೊಂದು ಕಡೆಗೆ ನಿಲ್ಲಲಿ, ನೀವು ಪುರುಷ ಬಾಂಧವರಿಗೆ ಉಚಿತ ಸಲಹೆಗಳನ್ನು ಕೊಡುತ್ತಲೂ ಸಾನುಭೂತಿಯನ್ನು ಪ್ರದರ್ಶಿಸುತ್ತಲೂ, ಸೋದರಿಯರಿಗೆ ಸಮಯೋಚಿತವಾಗಿ ಶ್ರಮ ಸಹಾಯ, ವಾಕ್ಸಹಾಯ ಗಳನ್ನು ಮಾಡುತ್ತಲೂ ಅವಲಂಬಪ್ರಾಯರಾಗಿದ್ದು ನಿರ್ದಿಷ್ಟ ವಸ್ತುವನ್ನು ಸಾಧಿಸಿಕೊಳ್ಳಿರಿ! ತಾಯಿಯರೇ! ಅಬಲೆಯರ ಮೇಲೆ ಬೀಳಬರುತ್ತಿರುವ **ಈ ದೌರ್ಜನ್ಯಾಪವಾದದ ಅಶನಿಪಾತವು ನಿಮ್ಮ ಸೌಜನ್ಯರೂಪ ವಾದ ಯೋಗದಂಡದಿಂದ ನಿವಾರಿಸಲ್ಪಟ್ಟು ಆರ್ಯಮಹಿಳೆಯರ ಪ್ರಾಶಸ್ತ್ಯವು ಮತ್ತೆ ಪ್ರಕಾಶಕ್ಕೆ ಬರಬೇಕಾಗಿರುವುದು. ಆದುದ**

**ರಿಂದ ಮತ್ತೆ ಮತ್ತೆ ಒತ್ತಿಯೊತ್ತಿ ಹೇಳುತ್ತಿರುವೆನು; ಹುಂ, ಪ್ರಯತ್ನಪರರಾಗಿರಿ; ಪರಾತ್ಪರನನ್ನು ಕುರಿತು ಪ್ರಾರ್ಥಿಸಿರಿ. ಮಾತೃದೈವವನ್ನು ಧ್ಯಾನಿಸಿರಿ, ಪತಿಯನ್ನು ಸ್ಮರಿಸಿ ಸಾಕ್ಷಾತ್ಕಾರವಾಗುವಂತೆ ಮಾಡಿಕೊಳ್ಳಿರಿ, ಕಾಲಹರಣಮಾಡಬೇಡಿರಿ!!**

ಗೃಹಿಣಿಯರಾಗಿರುವ ಆರ್ಯನಾರೀಮಣಿಯರೇ ಕೈಜೋಡಿಸಿ ಬೇಡುವೆನು, ನಿಮ್ಮ ಬಲಭುಜದಂತೆ ಸಹಾಯಕಾರಿಗಳಾಗಿರುವ ಈ ಯೋಗಿನಿಯರನ್ನು ಪೂಜ್ಯಭಾವದಿಂದ ಸಂಭಾವಿಸಿರಿ. ಶಾಂತಚಿತ್ತರಾಗಿ ಕಾರ್ಯದಲ್ಲಿ ತತ್ಪರರಾಗಿ ನಿಲ್ಲಿರಿ.

ದೇಶೀಯ ಸೋದರರೇ! ಕೈಜೋಡಿಸಿ ಬೇಡಿಕೊಳ್ಳುವೆವು, ಮೊದಲಿಂದ ತುದಿಯವರೆಗೆ ಮತ್ತೊಮ್ಮೆ ನೋಡಿ ವಿಚಾರಮಾಡಿರಿ. ಸೋದರಿಯ ಸವಿನಯ ನಿವೇದನವನ್ನು ಚಿತ್ತಕ್ಕೆ ತಂದುಕೊಂಡು, ಅದನ್ನು ಆಚರಣೆಗೆ ತರಲು ಪ್ರಯತ್ನಪರರಾಗಿರಿ.

ಆರ್ಯಬಾಂಧವರೇ! ನಾರಿಯರ ಮೇಲೆ ಬರಿದೆ ದೂರು ಹೊರಿಸುವುದನ್ನು ಬಿಟ್ಟು, ಕಾರಣ–ಕಾರ್ಯ ಪರಿಣಾಮಗಳನ್ನೂ ಚಿಂತಿಸಿ, ಅದನ್ನು ಸುಧಾರಿಸಲು ಸಂಕಲ್ಪಮಾಡಿರಿ. ಅಬಲೆಯರನ್ನು ದೌರ್ಜನ್ಯ ರೋಗದಿಂದ ಬಿಡುಗಡೆಹೊಂದಿಸಿ ಸೌಜನ್ಯವೆಂಬ ನೂತನ ಕಾಂತಿಯಿಂದ ಪ್ರಕಾಶಿಸುವಂತೆ ಚಿಕಿತ್ಸೆಮಾಡಿರಿ. ನೀವು ವಿವೇಕಶಾಲಿಗಳೆನ್ನಿಸಿರುವವರು; ಆದುದರಿಂದ ಅವರನ್ನು ವಿವೇಕಮಾರ್ಗದಲ್ಲಿ ಕರೆದೊಯ್ಯುವುದು ನಿಮ್ಮ ಕೆಲಸವೆಂಬುದನ್ನು ನೆನಪಿನಲ್ಲಿಡಿರಿ. ಬಾಂಧವರೇ! ಪ್ರಾರ್ಥಿಸುವೆವು, ಇತ್ತ ನಿಮ್ಮ ಮಹಿಳೆಯರನ್ನು ಸಾದರಿಸಿ ಸಹಕಾರಪಾತ್ರವಾಗಿ ಮಾಡಿಕೊಳ್ಳಿರಿ. ಅತ್ತ ನಿಮ್ಮ ಸೋದರಿಯರನ್ನು ಸಂಭಾವಿಸಿ ಪ್ರೋತ್ಸಾಹಕರನ್ನಾಗಿ ಮಾಡಿಕೊಂಡು ಕೆಲಸವನ್ನು ನೆರವೇರಿಸಿರಿ. ಸತ್ಸಂಕಲ್ಪಕ್ಕೆ ಸಿದ್ಧಿಯು ತಪ್ಪದೆಂದು ನಂಬಿರಿ.

ಹೂಂ ಬನ್ನಿರಿ, ತಾಯಿಯರೇ! ಅಕ್ಕತಂಗಿಯರೇ! ಅಗ್ರಜಾನುಜರೇ ಮೂರುವರ್ಗದವರೂ ಮುಂದೆ ಬಂದು ಒಮ್ಮನಸ್ಸಿನಿಂದ ಪರಮಾತ್ಮನನ್ನು ಪ್ರಾರ್ಥಿಸಿರಿ.

ಎಲ್ಲಿ, ಏನೆಂದು ಪ್ರಾರ್ಥಿಸುವಿರಿ? ಏಕನಿಷ್ಠೆಯಿಂದ–ಪೂರ್ಣಭರವಸೆಯಿಂದ–ಭಕ್ತಿಪಾರವಶ್ಯತೆಯಿಂದ ಸಂಪ್ರಾರ್ಥಿಸಿರಿ.

"ಪರಾತ್ಪರಾ, ಪರಂಧಾಮ, ಪುರುಷೋತ್ತಮ, ಆಪದ್ಬಾಂಧವಾ, ಅನಾಥನಾಥಾ! ಕೃಪೆಮಾಡು, ಕೃಪೆಮಾಡು! ದಯಾಮೂಲವಾಗಿ ಮಾತೃರೂಪದಿಂದ ನಮ್ಮಲ್ಲಿ ಅವ್ಯಾಜ ವಾತ್ಸಲ್ಯವನ್ನು ತೋರಿ ಚೈತನ್ಯವನ್ನುಂಟುಮಾಡು. ಕ್ಷಮಾರೂಪದಿಂದ ಗುರುವಾಗಿ, ನಮ್ಮ ಅಜ್ಞಾನಾಂಧಕಾರವನ್ನು ಹೋಗಲಾಡಿಸಿ ಅನಂತಾಪರಾಧಗಳನ್ನೂ ಕ್ಷಮಿಸಿ **ವಿವೇಕೋದಯದಿಂದ** ನಿನ್ನನ್ನು ನೋಡುವಂತೆ ಮಾಡಿ ಉದ್ಧರಿಸು. ದೇವ, ಔದಾರ್ಯ ಗುಣರೂಪದಿಂದ ಪಿತನೂ ಪತಿಯೂ ಸಮಸ್ತ ಗತಿಸ್ವರೂಪನೂ ಆಗಿ, ನಮ್ಮಲ್ಲಿ ಸದ್ಗುಣಗಳನ್ನುಂಟುಮಾಡಿ, ಪರತರಾನಂದವನ್ನು ಅನುಗ್ರಹಿಸಿ ಕಾಪಾಡು. ಜಗಜ್ಜನಕಾ! ಕೃಪೆಮಾಡು. ನಿನ್ನ ಪೂರ್ಣಾಭಿಮಾನಕ್ಕೆ ಪಾತ್ರರಾದ ಅಬಲೆಯರಲ್ಲಿ ಅನುಕಂಪನವನ್ನು ತೋರಿ, ಅಪವಾದರೂಪದ ದೌರ್ಜನ್ಯ ರೋಗವನ್ನು ಶಮನಮಾಡು. ನಿನ್ನ ಕೃಪೆಯಿಂದ **ಈ ಅಬಲಾ ದೌರ್ಜನ್ಯನಾಮಕ** ಲೇಖನವೂ ಉಪಯೋಗಕರವೆನ್ನಿಸಿ ನಮ್ಮವರಿಂದ ಆದರಿಸಲ್ಪಡುವಂತೆಯೂ, ತನ್ನ ಉದ್ದೇಶವನ್ನೂ ಸಂಕಲ್ಪವನ್ನೂ ಅಲ್ಪ ಸ್ವಲ್ಪವಾದರೂ ಸಾಫಲ್ಯಹೊಂದುವಂತೆಯೂ ವರವನ್ನು ದಯೆಪಾಲಿಸು. **ಸ್ವಾಮಿನ್, ಸರ್ವಕಾಲ ಸರ್ವಾವಸ್ಥೆ**ಯಲ್ಲಿಯೂ ನಮ್ಮ ಸ್ಮೃತಿಪಥದಲ್ಲಿದ್ದು ನಮ್ಮ ಸಂಪ್ರಾರ್ಥನೆಯನ್ನು ಲಾಲಿಸಿ ಪಾಲಿಸುತ್ತಿರು!"

"ಅಲ್ಪಂಚೇದನವೇಕ್ಷಣೀಯ ಸರಣಾಪಾರೋಪ್ಯತಾಂ ಮತ್ಕೃತಂ ।
ಕಿಂಚಿದ್ಭೂರಿಭವೇದಿದಂ ಯದಿ ಗುರೂನ್ ಸಂಪ್ರೇಕ್ಷ್ಯಮೇತ್ಯಜ್ಯತಾಂ ॥
ಯದ್ಧ್ಯಾನನ್ತಮನನ್ತವೈಭವ ಜುಷಾ ರಂಗ ಕ್ಷಮಾವಲ್ಲಭ ।
ತ್ವತ್ ಕ್ಷಾನ್ತ್ಯಾಃ ಖಲುಲಕ್ಷ್ಯತಾಮನುಗುಣಾಮಾನೀಯತಾಂ ತತ್ತ್ವಯಾ ॥"

ಓಂ ಶಾಂತಿಶ್ಶಾಂತಿಶ್ಶಾಂತಿಃ

---

235–31. ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ